ಶ್ರೀ ಸರಸ್ವತೀಭೂಷಣ

# ಪಂಡಿತ ಲೋಕನಾಥ ಶಾಸ್ತ್ರಿಯವರ ಜೀವನ ಚರಿತ್ರೆ.



ಜನನ:
6 ಮಾರ್ಚ 1892

ಮರಣ:
26 ಮೇ - 1952


ಸಂಪಾದಕ, ಪ್ರಕಾಶಕ

**ವರ್ಧಮಾನ ಪಾರ್ಶ್ವನಾಥ ಶಾಸ್ತ್ರಿ.**

[ ವಿದ್ಯಾವಾಚಸ್ಪತಿ ]



ಕಲ್ಯಾಣಭವನ ಸೊಲ್ಲಾಪುರ.

**JUNE 1952**

ಪುಲವೀಡೊಳ್ಪಲವುಂ ಪಗಲ್ಪರದನಿರ್ದಾದಾಯುಮಂ ಪೆತ್ತು ಬಾ-
ಳ್ಕೆಲೆಯುಳ್ಳೊಂದೆಡೆಗೆಯ್ದಲಾ ನೆಲೆಯುವನೋರ್ವಂತೆ ಪಾಳ್ಮೆಯ್ಯೊಳಿ-||
ದೋರ್ಲವಿಂ ಪುಣ್ಯಮನೀ ಮನಂ ಗಳಿಸಿಕೊಂಡಾ ದೇವಲೋಕಕ್ಕೆ ಪೋ-
ಗಲೊಡಂ ನೋವರವಂಗೋ ನೋವು ತವಗೋ ರತ್ನಾಕರಾಧೀಶ್ವರಾ! ||

⁜ ⁜ ⁜ ⁜

ದಾನಕ್ಕಿಲ್ಲ ತಪಕ್ಕೆ ಸಲ್ಲ ಮರಣಂಗಾಣ್ಬಂದು ನಿಮ್ಮಕ್ಷರ-
ಧ್ಯಾನಕ್ಕೊಲ್ಲೆನೆನಿಪ್ಪವಂ ಮಡಿಯೆ ನೋಯಲ್ತಕ್ಕುದಿಷ್ಟಾದಿಗಳ್ ||
ದಾನಂ ಗೆಯ್ದು ತಪಕ್ಕೆ ಪಾಯ್ದು ಮರಣಂಗಾಣ್ಬಂದು ನಿಮ್ಮಕ್ಷರ-
ಧ್ಯಾನಂ ಗೆಯ್ದಳಿದಂಗೆ ಶೋಕಿಪರದೇಂ ? ರತ್ನಾಕರಾಧೀಶ್ವರಾ ! ||

⁜ ⁜ ⁜ ⁜

ಸಾವಿಂಗಂಜಲದೇಕೆ ಸಾವು ಪೆರತೇ ಮೆಯ್ದಾಳ್ದಿದರ್ಗಂಜಲಾ ।
ಸಾವೇಂ ಮಾಣ್ಗುಮೆ ಕಾವರುಂಟೆಯಕಟಾ! ಈ ಜೀವನೇನೆಂದುವುಂ,
ಸಾವಂ ಕಂಡವನಲ್ಲನೇ ಮರಣವಾಗಲ್ಕೆಂದದೇಂ ಪುಟ್ಟನೇ ।
ನೀನೆನ್ನೊಳ್ನಿಲೆ ಸಾವುದುಂ ಸುಖವಲ್ತೆ ! ರತ್ನಾಕರಾಧೀಶ್ವರಾ ! ||

⁜ ⁜ ⁜ ⁜



ಶ್ರೀ ಪಂ. ಲೋಕನಾಥ ಶಾಸ್ತ್ರಿಗಳು.

ಜನ್ಮ ೧೮೯೨ ]        [ ಮರಣ ೧೯೫೨

## ಪೂಜ್ಯವರ !

ತಾವು ಜೀವಮಾನದಲ್ಲಿ ಮಾಡಿದ ಜನಸೇವೆ, ಜಿನಸೇವೆ, ಜಿನಾಗಮ ಮತ್ತು ಜಿನಧರ್ಮದ ಚಿರಸೇವೆಯನ್ನು ಸಮಾಜವು ಎಂದೆಂದೂ ಮರೆಯಲಾರದು. ಶ್ರೀ ವೀರವಾಣಿ ವಿಲಾಸ ಜೈನ ಸಿದ್ಧಾಂತ ಭವನ, ಶ್ರೀ ದಿ. ಜೈನ ಬ್ರಾಹ್ಮಣ ಸಂಘ ಮೊದಲಾದ ಸಂಸ್ಥೆಗಳ ಸಂಸ್ಥಾಪನೆ, ಅನೇಕ ಕನ್ನಡ ಸಾಹಿತ್ಯಗಳ ಪ್ರಕಾಶನ ಮತ್ತು ಅನೇಕ ಸಾಹಿತ್ಯಸೇವಕ ವಿದ್ವಾಂಸರ ನಿರ್ಮಾಣ ಮೊದಲಾದವುಗಳು ತಮ್ಮ ಜೀವನದ ಜೀವಂತಸ್ಮಾರಕಗಳು.

ಜನಕಸುಖವಂಚಿತನಾದ ಈ ಸೇವಕನಿಗೆ ಪಿತೃ-ಭ್ರಾತೃಸ್ಥಾನೀಯರಾಗಿ ಬಯಸಿದ ಚಿರಂತನ ಹಿತಚಿಂತನೆ ಅವಿಸ್ಮರಣೀಯವಾಗಿದೆ. ತಮ್ಮ ಆದರ್ಶಜೀವನದ ಪುಣ್ಯಸ್ಮೃತಿಯು ಸರ್ವತ್ರ ಚಿರಕಾಲದವರೆಗಿರಲೆಂಬ ಶುಭಭಾವನೆಯಿಂದ ಈ ಆದರ್ಶ ಮತ್ತು ಅನುಕರಣೀಯ ಪರಿಚಯುವನ್ನು ಪ್ರಕಟಿಸಿ ತಮ್ಮ ಪರೋಕ್ಷ ಕರಕಮಲಗಳಲ್ಲಿ ಭಕ್ತಿಯಿಂದ ಸಮರ್ಪಿಸಿದ್ದೇನೆ.



ಸೊಲ್ಲಾಪುರ
ತಾ. ೧೦ | ೬ | ೧೯೫೨

ವರ್ಧಮಾನ ಶಾಸ್ತ್ರಿ
[ವಿದ್ಯಾವಾಚಸ್ಪತಿ]

ಓಂ

ಶ್ರೀ ವೀತರಾಗಾಯ ನಮಃ

# ಶ್ರೀ ಸರಸ್ವತೀಭೂಷಣ ಪಂ. ಲೋಕನಾಥ ಶಾಸ್ತ್ರಿಗಳ

# ಜೀವನ ಚರಿತ್ರೆ.

---

**' ಪರಿವರ್ತಿನಿ ಸಂಸಾರೇ ಮೃತಃ ಕೋವಾ ನ ಜಾಯತೆ '**

ಈ ಚತುರ್ಗತಿ ಭ್ರಮಣರೂಪವಾದ ಸಂಸಾರವು ಅನಾದಿ ! ಈ ಸಂಸಾರದಲ್ಲಿ ಹುಟ್ಟಿದವನು ಸಾಯಲೇ ಬೇಕು; ಸತ್ತವನು ಹುಟ್ಟಲೇ ಬೇಕು, ಎಂಬ ವಿಧಿನಿಯಮ ! ನಾವು ಎಷ್ಟು ಪ್ರಯತ್ನಪಟ್ಟರೂ ಯಾವನೂ ಒಂದೇ ಪರ್ಯಾಯದಲ್ಲಿ ಬಹುಗಾಲ ಜೀವಿಸಿರಲಾರ ! ಆತ ಪರೋಪಕಾರಿಯಾಗಿರಲಿ,ಧಾರ್ಮಿಕನಾಗಿರಲಿ ಅಥವಾ ಪರಮಾತ್ಮನಲ್ಲಿ ಭಕ್ತಿಯುಳ್ಳ ಮಹಾಯೋಗಿಯೇ ಆಗಿರಲಿ, ಅಂತಹ ಮಹಾವ್ಯಕ್ತಿಯೂ ಕೂಡ ತನ್ನ ಆಯುಷ್ಯದ ಅವಸಾನದ ಕಾಲದಲ್ಲಿ ಈ ಪುದ್ಗಲಮಯವಾದ ದೇಹಪಂಜರವನ್ನು ಬಿಟ್ಟು ತೊಲಗಲೇ ಬೇಕು ! ಆದಕ್ಕೇನೇ ವ್ಯವಹಾರದಲ್ಲಿ ಮರಣವೆಂದನ್ನುವ ರೂಢಿ ! ಅಂತೂ ಮೊದಲಿನ ಶರೀರವನ್ನು ಬಿಡುವುದಕ್ಕೆ ಮರಣವೆಂದೂ ನೂತನ ಶರೀರವನ್ನು ಧರಿಸುವುದಕ್ಕೆ ಜನನವೆಂದೂ ಹೆಸರು.

ಜ್ಞಾನಾವರಣೀಯ ಮೊದಲಾದ ಕರ್ಮಪಿಂಡಮಯವಾದ ಕಾರ್ಮಣ ದೇಹವನ್ನು ನಾಶ ಮಾಡಿದ ಪರಮಾತ್ಮರು ಪುನರಪಿ ಜನನವನ್ನು ಹೊಂದಲಾರರು. ಆದಕ್ಕೆ ಮುಕ್ತಿ ಅಥವಾ ಮೋಕ್ಷನೆಂದು ಹೆಸರು. ಆ ಮುಕ್ತಾತ್ಮರು ಸ್ವಾಧೀನವೂ ಬಾಧೆಯಿಲ್ಲದುದೂ ಸಚ್ಚಿದಾನಂದಮಯವೂ ಆದ ಸಾತ್ಮಾನುಭವನರೂಪ ಆನಂದಾಮೃತವನ್ನು ಪಾನ ಮಾಡುತ್ತಾನಂತಕಾಲದವರೆಗೆ ಅಲ್ಲಿಯೇ ಸುಖವನ್ನು ಅನುಭವಿಸುತ್ತಿರುವರು. ಅವರೆಂದೂ ತಿರುಗಿ ಸಂಸಾರಕ್ಕೆ ಬರಲಾರರು. ಅಂತಹ ಪರಮಾತ್ಮರಿಗೆ ಸಿದ್ಧರು,ನಿರಂಜನರು,ಮೊದಲಾದ ಹೆಸರುಗಳಿವೆ.

ಜ್ಞಾನ ಮತ್ತು ದರ್ಶನ ಆತ್ಮನ ಮುಖ್ಯ ಗುಣ ! ಇದಕ್ಕೆ ಚೈತನ್ಯವೆಂದು ಹೆಸರು. ನಾನು ತಿಳಿಯುವೆನು, ನಾನು ನೋಡುವೆನು, ನಾನು ಕೇಳುವೆನು, ನಾನು ಸುಖಿಯಾಗಿರುವೆನು, ನಾನು ದುಃಖಿಯಾಗಿರುವೆನು. " ಇದೆಲ್ಲವೂ ಪ್ರತಿಪ್ರಾಣಿಗೂ ಸ್ವಸಂವೇದ್ಯವಾದ ವಿಷಯ ! ಆ ಚೈತನ್ಯಗುಣ ವಿಶಿಷ್ಟನಾದ ಆತ್ಮನಿಗೆ ಎಂದೂ ನಾಶವಿಲ್ಲ. ಆತನು ಅಜರ ! ಅಮರ,ಮತ್ತು ಅವಿನಾಶಿಯಾದವನು. ಆತ್ಮನು ತನ್ನ ಸಮಸ್ತಗುಣಗಳೊಡನೆ ಸಂಸಾರದಲ್ಲಿ ಯಾವುದಾ

ದರೊಂದು ಪರ್ಯಾಯಲ್ಲಿ ಕರ್ಮಗಳಿಂದ ಮುಕ್ತನಾಗದಿರುವ ತನಕ ಇದ್ದೇ ತೀರಬೇಕು. ಅಂತೂ ಈ ದೇಹಸಂಬಂಧವು ಯಾರನ್ನೂ ಅಮರನನ್ನಾಗಿ ಮಾಡದು. ಆದ್ದರಿಂದ ಪುಣ್ಯಾತ್ಮರು ಈ ಜನ್ಮದಲ್ಲಿ ನಿರೋಗವೂ ಸುಂದರವೂ ಆದ ಮಾನವ ಶರೀರವನ್ನು ಪಡೆಯಬೇಕೆಂದು ಬಯಸುವುದಲ್ಲದೆ, ಪರಜನ್ಮದಲ್ಲಿಯೂ ದೃಢಕಾಯರಾಗುವುದಕ್ಕೆ ಪುಣ್ಯಸಂಚಯವನ್ನು ಮಾಡಿಕೊಳ್ಳುತ್ತಾರೆ.

ಲೋಕದಲ್ಲಿ ಮನುಷ್ಯಜನ್ಮವನ್ನು ಪಡೆಯುವುದು ಬಲು ಕಷ್ಟ ! ಅಂತಹ ದುರ್ಲಭವಾದ ನರಜನ್ಮವನ್ನು ಹೊಂದಿ ವಿವೇಕಿಯಾದವನು ಹೇಯೋಪಾದೇಯ ಜ್ಞಾನವುಳ್ಳವನಾಗಿ ಅತಿಸೂಕ್ಷ್ಮತತ್ವವಾದ ಶುದ್ಧಾತ್ಮನ ಅನುಭವದಿಂದ ಕರ್ಮರಜಸ್ಸನ್ನು ತೊಳೆದು ಪರಿಶುದ್ಧನಾಗುವನು.

ಮಾನವನು ಧರ್ಮ, ಅರ್ಥ, ಕಾಮ ಮತ್ತು ಮೋಕ್ಷಗಳೆಂಬ ಪುರುಷಾರ್ಥಚತುಷ್ಟಯಗಳನ್ನು ಸಾಧಿಸಬೇಕು. ಮೋಕ್ಷವು ಅಂತಿಮ ಪುರುಷಾರ್ಥ; ಅರ್ಥ ಮತ್ತು ಕಾಮ ಪುರುಷಾರ್ಥಗಳಿಗೆ ಧರ್ಮವೇ ಮೂಲಕಾರಣ; ಧರ್ಮವಿಲ್ಲದೆ ಮಿಕ್ಕ ಮೂರು ಪುರುಷಾರ್ಥಗಳು ಪ್ರಾಪ್ತವಾಗಲಾರವು. ಆದ್ದರಿಂದ ಧರ್ಮಕಾರ್ಯವನ್ನು ಅವಶ್ಯ ಮಾಡಲೇ ಬೇಕು.

ಯಥಾರ್ಥವಾಗಿ ಆತ್ಮನ ಪರಿಣಾಮಕ್ಕೆ ಧರ್ಮವೆಂದು ಹೆಸರು. ಅದು ಪರಮಾತ್ಮನಲ್ಲಿ ತನ್ಮಯತೆಯನ್ನು ಹೊಂದಿ ವೀತರಾಗಮಯವಾಗಿರಬೇಕು. ಅಂತಹ ಪರಿಣಾಮವೇ ಆತ್ಮನನ್ನು ಕರ್ಮಬಂಧನದಿಂದ ಬಿಡಿಸಿ, ಮುಕ್ತಿಯನ್ನು ಹೊಂದಿಸಬಲ್ಲುದು. ಅಂತಹ ಪರಿಣಾಮ ಲಭಿಸದಿದ್ದರೂ ಶುಭಪರಿಣಾಮಕ್ಕೂ ಧರ್ಮವೆಂದು ಹೇಳುವರು. ಅದರಿಂದ ಪುಣ್ಯಪ್ರಾಪ್ತಿಯಾಗಿ ಪಾಪಕಾರ್ಯಗಳಿಂದ ದೂರವಾಗುವನು. ಅಂತಹ ಶುಭ ಪರಿಣಾಮ ಮತ್ತು ಕ್ರೋಧಾದಿಕಷಾಯಗಳ ಉಪಶಾಂತತೆಯಿಂದ ವೀತರಾಗಭಾವನೆಯುಂಟಾಗುವುದು.

ಈ ಉಭಯ ಪರಿಣಾಮಗಳಿಂದ ರಹಿತವೂ ಕಷಾಯಯುಕ್ತವೂ ಇಂದ್ರಿಯ ಸುಖಗಳಲ್ಲಿ ಅನುರಕ್ತವೂ ಪಾಪಕ್ಕೆ ಕಾರಣವೂ ಆದ ಅಶುಭ ಪರಿಣಾಮಕ್ಕೆ ಅಧರ್ಮವೆಂದು ಹೆಸರು.

ಕೆಲವರು ಇಪ್ಪತ್ತನಾಲ್ಕು ಮಂದಿ ತೀರ್ಥಂಕರರು, ಹನ್ನೆರಡು ಮಂದಿ ಚಕ್ರವರ್ತಿಗಳು ಮೊದಲಾದವರಂತೆ ಕ್ಷತ್ರಿಯ ಕುಲೋತ್ಪನ್ನರಾಗಿ ಆತ್ಮನನ್ನು ಪರಿಶುದ್ಧಗೊಳಿಸುವುದಕ್ಕೋಸ್ಕರ ವೀತರಾಗಭಾವನೆಯಿಂದ ಯೋಗಾಭ್ಯಾಸದಲ್ಲಿ ಮಗ್ನರಾಗಿ ಕರ್ಮಕ್ಷಯವನ್ನು ಮಾಡಿ ಮೋಕ್ಷಪುರುಷಾರ್ಥವನ್ನು ಸಾಧಿಸಿ ಕೊಳ್ಳುತ್ತಾರೆ.ಆದರೆ ಕೆಲವರು ಅಂತಹ ವೀತರಾಗಭಾವನೆಯನ್ನು ಸಾಧಿಸಲು ಅಸಮರ್ಥರಾಗಿ ಗೃಹಸ್ಥ ಧರ್ಮದಲ್ಲಿಯೇ ಇದ್ದು, ಧರ್ಮ, ಅರ್ಥ, ಮತ್ತು ಕಾಮ ಪುರುಷಾರ್ಥಗಳನ್ನು ಸಾಧಿಸಿಕೊಳ್ಳುತ್ತಾರೆ.

ಅರ್ಥವೆಂದರೆ ಸಂಪತ್ತು. ಕಾಮವೆಂದರೆ ಇಂದ್ರಿಯ ಸುಖ, ಇವುಗಳಿಗೆ ಪುಣ್ಯಕರ್ಮವು ಅಂತರಂಗ ಕಾರಣ ! ಬಾಹ್ಯಪ್ರಯತ್ನ ಅಥವಾ ಪುರುಷಾರ್ಥ

ಬಾಹ್ಯಕಾರಣ. ಎರಡು ಚಕ್ರಗಳಿಲ್ಲದೆ ಗಾಡಿಯು ಚಲಿಸದಿರುವಂತೆ ಅಂತರಂಗ ಮತ್ತು ಬಾಹ್ಯಕಾರಣಗಳಿಲ್ಲದೆ, ಅರ್ಥ ಮತ್ತು ಕಾಮಪುರುಷಾರ್ಥಗಳು ಪ್ರಾಪ್ತವಾಗಲಾರವು. ಆಲಸ್ಯವಂತರಾದ ನಿರುದ್ಯೋಗಿಗಳು ಅಂತರಂಗ ಕಾರಣವಿದ್ದರೂ ಬಾಹ್ಯಪ್ರಯತ್ನವಿಲ್ಲದೆ ನ್ಯಾಯಪೂರ್ವಕವಾದ ದ್ರವ್ಯಸಂಪಾದನೆ ಮತ್ತು ಇಂದ್ರಿಯ ಸುಖಗಳನ್ನು ಹೊಂದಲಾರರು.

ಈ ಸಂಸಾರದಲ್ಲಿ ಯಾರು ತನ್ನ ಜೀವನದಲ್ಲಿ ಪ್ರತಿಸಮಯವನ್ನು ನಿರರ್ಥಕವನ್ನಾಗಿ ಮಾಡದೆ ತನ್ನಾತ್ಮನು ಪರಮಾತ್ಮಶಕ್ತಿಯ ಭಂಡಾರವೆಂದರಿದು ಪರಮ ಸುಖಾನುಭವನದಲ್ಲಿ ಭಕ್ತಿಯನ್ನಿಟ್ಟು, ಗೃಹಸ್ಥಜೀವನದಲ್ಲಿ ಇಂದ್ರಿಯ ಭೋಗವು ನಿಸ್ಸಾರವೆಂದು ಭಾವಿಸಿ, ಅರ್ಥ ಮತ್ತು ಕಾಮಗಳನ್ನು ಸಾಧಿಸಿಕೊಂಡರೂ, ಪರೋಪಕಾರಕ್ಕಾಗಿ ಅವುಗಳನ್ನು ಉಪಯೋಗಿಸುವುದು ತನ್ನ ಕರ್ತವ್ಯವೆಂದು ತಿಳಿಯುತ್ತಾರೆಯೋ, ಅವರೇ, ತನ್ನ ಕೀರ್ತಿಯೆಂಬ ಸುಗಂಧವನ್ನು ಪಸರಿಸಬಲ್ಲರು. ಅಂತಹ ಪರೋಪಕಾರಿಗಳಿಂದ ಅನೇಕರಿಗೆ ಹಿತವಾಗುವುದು. ಅಂತಹ ವ್ಯಕ್ತಿಗಳಲ್ಲಿ ಒಬ್ಬವರಾದ ಸರಸ್ವತೀಭೂಷಣ ಪಂ. ಲೋಕನಾಥ ಶಾಸ್ತ್ರಿಗಳ ಜೀವನ ಪರಿಚಯವು ಇತರರಿಗೆ ಅನುಕರಣೀಯವೂ ಆದರ್ಶವೂ ಆಗಿರುವುದರಿಂದ ಅದನ್ನು ಇಲ್ಲಿ ಕೊಡಲಾಗುವುದು.

**ವೇಣೂರು:—** ಈ ತುಳುನಾಡಿನಲ್ಲಿ ವೇಣೂರು ಈಗ ಬಲು ಚಿಕ್ಕ ಹಳ್ಳಿಯಂತಿದ್ದರೂ, ಸುಮಾರು ೩೩೪ ವರ್ಷಗಳ ಹಿಂದೆ ಅಜಿಲವಂಶಿಯರ ರಾಜ್ಯಶಾಸನ ಕಾಲದಲ್ಲಿ ಇದೊಂದು ದೊಡ್ಡ ಪಟ್ಟಣವಾಗಿ ರಾಜಧಾನಿಯಾಗಿದ್ದಿತು. ಆಗ ಇಲ್ಲಿ ಜೈನರ ೭೭೦ ಮನೆಗಳಿದ್ದುವೆಂದೂ, ಆಗ ಜೈನರ ಹೆಚ್ಚಿನ ಉನ್ನತಕಾಲವೆಂದೂ ಶಿಲಾಶಾಸನಗಳಿಂದ ತಿಳಿದು ಬರುವುದು.

ಕ್ರಿ. ಶ. ೧೫೫೦ ರಿಂದ ೧೬೧೦ ರ ವರೆಗೆ ರಾಜ್ಯವಾಳಿದ ೪ ನೆಯ ವೀರ ತಿಮ್ಮಣ್ಣಾಜಿಲ ಶಾಸನಕಾಲದಲ್ಲಿ ವೇಣೂರು ಬಹಳ ಪ್ರಸಿದ್ಧಿಯನ್ನೂ ಉನ್ನತಿಯನ್ನೂ ಹೊಂದಿದ್ದಿತು. ಆ ಪುಣ್ಯಾತ್ಮರೇ ಶ್ರೀ ಗೋಮಟೇಶ್ವರ ಮೂರ್ತಿಯ ಸ್ಥಾಪನೆಯನ್ನು ಕ್ರಿ. ಶ. ೧೬೦೪ ರಲ್ಲಿ ಮಾಡಿಸಿದರು. ಅವರ ಹಿರಿಯ ಹೆಂಡಂದಿರಾದ ಪಾಂಡ್ಯಕ್ಕ ಮತ್ತು ಮಲ್ಲಿದೇವಿಯರೆಂಬೀರ್ವರು ಅಕ್ಕಂಗಳ ಬಸದಿಯನ್ನೂ ಕಿರಿಯ ಹೆಂಡತಿಯಾದ ಬಿಂಣಾಣಿ ಎಂಬವಳು ಬಿನ್ನಾಣಿ ಬಸದಿಯನ್ನೂ ಅದೇ ವರ್ಷದಲ್ಲಿ ನಿರ್ಮಾಪಿಸಿದ್ದಾಗಿದೆ. ಆದರೆ ಅಲ್ಲಿಯ ಬಸದಿಗಳಲ್ಲಿ ಶ್ರೀ ಶಾಂತೀಶ್ವರ ಸ್ವಾಮಿಯ ಕಲ್ಲುಬಸದಿಯೇ ಕೊಂಚ ಪ್ರಾಚೀನವಾದದ್ದು. ಅದರ ನಿರ್ಮಾಣವಾಗಿ ಸುಮಾರು ೪೬೩ ವರ್ಷಗಳಾದವು. ಈ ಬಸದಿಯು ೩ ನೆಯ ಪಾಂಡ್ಯಪ್ಪಜಿಲರ ಕಾಲದಲ್ಲಿ ಅಂದರೆ ಕ್ರಿ. ಶ. ೧೪೮೯ ರಲ್ಲಿ ನಿರ್ಮಾಪಿಸಲ್ಪಟ್ಟದಾಗಿದೆ.

**+ಬೆಳ್ಳಿಬೀಡು:—** ಈ ಅಜಿಲರಸರ ರಾಜಧಾನಿಯಾದ ವೇಣೂರಿನ

---

+ "ಯೆಲ್ಲವರಿಗೆ ಹೆಚ್ಚು ಮನೆತಾನಾದುದರಿಂದ, ಬೆಳ್ಳಿಬೀಡೆಂದಿಟ್ಟರದಕ್" ಎಂದು ಅಲ್ಲಿಯ ಚರಿತ್ರೆಯಲ್ಲಿ ಹೇಳುತ್ತಾರೆ.

ಸಮೀಪ ಸುಮಾರು ಆರು ಮೈಲು ದೂರವಿರುವ ಮರೋಡಿ ಎಂಬ ಗ್ರಾಮದಲ್ಲಿ ಬೆಳ್ಳಿಬೀಡೆಂಬ ಪ್ರಸಿದ್ಧವಾದ ಜೈನ ಮನೆತನವಿದೆ. ಅಲ್ಲಿ ಮಂಜುಕಂಬಳಿ ಮತ್ತು ಅಂತಕಂಬಳಿಯೆಂಬ ಸಹೋದರರು ಶಾ. ಶ. ೧೭೬೪ [ ಕ್ರಿ. ಶ. ೧೮೪೨ ] ರಲ್ಲಿ ಜಿನಚೈತ್ಯಾಲಯವನ್ನು ನಿರ್ಮಿಸಿ ಬಲು ವೈಭವದಿಂದ ಪಂಚಕಲ್ಯಾಣ ವಿಧಾನವನ್ನು ಮಾಡಿಸಿದರು.

ಅಂದಿನಿಂದ ಅಲ್ಲಿ ಪುರೋಹಿತ ಎಲಿಯಪ್ಪ ಯಿಂದ್ರರು ಅರ್ಚಕರಾಗಿ ನಿಯಮಿಸಲ್ಪಟ್ಟಿದ್ದರು. ಅವರ ಮೂಲಸ್ಥಾನವೇ ವೇಣೂರು; ಅವರು ಜ್ಯೋತಿಷ, ಕರ್ಮಕಾಂಡ, ಮಂತ್ರತಂತ್ರ ಮೊದಲಾದ ವಿಷಯಗಳಲ್ಲಿ ಅದ್ವಿತೀಯ ವಿದ್ವಾಂಸರೂ ಸದಾಚಾರ ಸಂಪನ್ನರೂ ಪರೋಪಕಾರಿಗಳೂ ಆಗಿದ್ದರು. ಅವರ ಸುಶೀಲೆಯಾದ ಪತ್ನಿ ಸೌ. ಧರಣಮ್ಮನ ಗರ್ಭದಲ್ಲಿ ಗುಮ್ಮಣ ಯಿಂದ್ರರು, ಚಂದವತಿ, ಪದ್ಮರಾಜಯ್ಯಯಿಂದ್ರರೆಂಬ ಮಕ್ಕಳು ಜನಿಸಿದರು. ಅವರಲ್ಲಿ ಗುಮ್ಮಣ ಇಂದ್ರರು ತನ್ನ ಐದನೇ ವಯಸ್ಸಿನಲ್ಲಿ ಅಕ್ಷರಾಭ್ಯಾಸಪೂರ್ವಕವಾಗಿ ವಿದ್ಯಾಭ್ಯಾಸವನ್ನು ಮಾಡುತ್ತಾ ತನ್ನ ಕುಲಪರಂಪರಾಗತವಾದ ವೈದಿಕವೃತ್ತಿಯಲ್ಲಿ ನಿಷ್ಣಾತರಾದರು. ಮತ್ತು ಜ್ಯೋತಿಷ, ಮಂತ್ರವಾದ ಮೊದಲಾದ ಶಾಸ್ತ್ರದಲ್ಲಿ ಹೆಚ್ಚಿನ ಅನುಭವಶಾಲಿಗಳಾಗಿದ್ದರು. ನಮ್ಮ ವೇಣೂರಿನ ಎಂಟು ಬಸ್ತಿಗಳ ಪೌರೋಹಿತ್ಯ ಶ್ರೀಗೋಮಟೇಶ್ವರ ಸ್ವಾಮಿಯ ಮಸ್ತಕಾಭಿಷೇಕ, ಮೊದಲಾದ ವಿಶೇಷಕಟ್ಲೆ—ಕಾರ್ಯಗಳನ್ನು ಮಾಡುವ ಅಧಿಕಾರ ಈ ಮನೆತನದರಿಗೆ ಇದ್ದಿತು, ಈಗಲೂ ಇದೆ.

ಪುರೋಹಿತ ಗುಮ್ಮಣ ಯಿಂದ್ರರು ತನ್ನ ನ್ಯಾಯಪೂರ್ವಕವಾದ ಪರಿಶ್ರಮದಿಂದ ದ್ರವ್ಯಸಂಪಾದನೆಯನ್ನು ಮಾಡಿ ತಕ್ಕಮಟ್ಟಿನ ಐಶ್ವರ್ಯಸಂಪನ್ನರೂ, ದೀರ್ಘವೂ ದೃಢವೂ ಅದ ದೇಹವುಳ್ಳವರೂ, ಸದಾಚಾರಿಗಳೂ ಸತ್ಯವಂತರೂ ಆಗಿದ್ದರು. ಇವರಿಗೆ ಅತಿ ವಿಚಕ್ಷಣೆಯೂ, ಶೀಲವತಿಯೂ, ಪ್ರಭುತ್ವಶಕ್ತಿಸಂಪನ್ನೆಯೂ ಆದ ಜಿನ್ನಮ್ಮ ಎಂಬ ಕುವರಿಯೊಡನೆ ವಿವಾಹವಾಗಿದ್ದಿತು. ಆಕೆಯ ಗರ್ಭದಲ್ಲಿ ಕ್ರಮವಾಗಿ ಆದಯ್ಯಯಿಂದ್ರ, ನಾಗಪ್ಪಯಿಂದ್ರ, ಪದ್ಮಯ್ಯಯಿಂದ್ರ, ಪಾಚಪ್ಪಯಿಂದ್ರ, ಬ್ರಹ್ಮಯ್ಯಯಿಂದ್ರ, ಸಂಕಮ್ಮ ಮತ್ತು ಪದ್ಮಾವತಿಯರೆಂಬ ಏಳು ಮಂದಿ ಮಕ್ಕಳು ಹುಟ್ಟಿದರು.

ಇವರೆಲ್ಲರಿಗೂ ತ್ರೈವರ್ಣಿಕಾಚಾರ ಶಾಸ್ತ್ರಾನುಸಾರವಾಗಿ ಗರ್ಭಾಧಾನಾದಿ ಷೋಡಶಕ್ರಿಯೆಗಳನ್ನು ಯಥಾಕಾಲದಲ್ಲಿ ನೆರವೇರಿಸಿದ್ದರು. ಇವರಲ್ಲಿ ಗಂಡುಮಕ್ಕಳು ತಮ್ಮ ಕುಲವೃತ್ತಿಯಾದ ಪೂಜಾವಿಧಿ, ಪಂಚಕಲ್ಯಾಣವಿಧಿ, ಮಂತ್ರವಾದ, ಜ್ಯೋತಿಷ ಮೊದಲಾದ ವಿದ್ಯೆಗಳಲ್ಲಿ ಒಳ್ಳೇ ಅನುಭವಶಾಲಿಗಳಾಗಿದ್ದರು. ಇವರ ಪೂಜ್ಯ ಪಿತೃವರ್ಯರಾದ ಗುಮ್ಮಣಯಿಂದ್ರರು ತನ್ನ ಸ್ವಾರ್ಜಿತವಾದ ಆಸ್ತಿ ಮೊದಲಾದ ಸಂಪತ್ತನ್ನು ತನ್ನ ಜೀವಮಾನದಲ್ಲೇ ವಿಭಾ



ಶ್ರೀ ತಾಯಿಯವರಾದ ಅಮೃತಮತಿ ಅಮ್ಮನವರು.



ಪಂ. ಲೋಕನಾಥ ಶಾಸ್ತ್ರಿಯವರ ಪರಿವಾರ.

ಗಿಸಿಕೊಟ್ಟಿದರು. ಆ ಮೇಲೆ ತನ್ನ ಮೊದಲಿನ ಸ್ವರ್ಗಸ್ಥಳಾದನಂತರ ತನ್ನ ೬೫ನೆಯ ವಯಸ್ಸಿನಲ್ಲಿ ಮರುದೇವಿಯೆಂಬ ಕನ್ನಿಕೆಯನ್ನು ಮದುವೆಯಾದರು. ಆಕೆಯಲ್ಲಿಯೂ ಒಂದು ಮಗುವು ಹುಟ್ಟಿದ್ದಿತು. ಅವರು ನಂತರ ಕೆಲವು ಕಾಲ ವೇಣೂರಿನ ಹಿರಿಯರ ಮನೆಯಲ್ಲಿಯೇ ಇದ್ದು, ಅಂತಹ ವೃದ್ಧಾಪ್ಯದಲ್ಲಿಯೂ ಸಹಸ್ರಾರು ರೂಪ್ಯಾಗಳ ಆಸ್ತಿಯನ್ನು ಮಾಡಿ, ತನ್ನ ಎರಡನೆಯ ಹೆಂಡತಿಗೆ ಕೊಟ್ಟಿದ್ದರು. ಅವರು ತನ್ನ ಜೀವಮಾನದಲ್ಲಿ ಅನೇಕ ಸಂಪ್ರೋಕ್ಷಣೆಗಳನ್ನೂ ಎರಡು ಸಾರಿ ವೇಣೂರಿನ ಬಾಹುಬಲಿ ಸ್ವಾಮಿಗೆ ಮಹಾಮಸ್ತಕಾಭಿಷೇಕವನ್ನೂ ಮಾಡಿದ್ದರು. ಕೊನೆಗೆ ಅವರು ತನ್ನ ೮೫ ನೆಯ ವಯಸ್ಸಿನಲ್ಲಿ ಸ್ವರ್ಗಸ್ಥರಾದರು. ಅವರು ತನ್ನ ಅವಸಾನಕಾಲದ ವರೆಗೂ ಕಲ್ಲುಬಸ್ತಿ ಮೊದಲಾದ ಬಸ್ತಿಗಳ ಮೊಕ್ತೇಸರರಾಗಿದ್ದು, ಆ ಬಸ್ತಿಗಳ ಮೇಲ್ವಿಚಾರವನ್ನೂ ಮಾನಮರ್ಯಾದೆಗಳನ್ನೂ ನಡಿಸಿಕೊಂಡು ಬರುತ್ತಿದ್ದರು.

ಅವರ ಚತುರ್ಥ ಪುತ್ರರಾದ ಪಾಚಪ್ಪಯಿಂದ್ರರು ಕೂಡ ಕರ್ಮಕಾಂಡ, ಮಂತ್ರವಾದ, ಜ್ಯೋತಿಷ ಮೊದಲಾದ ವಿಷಯಗಳಲ್ಲಿ ಒಳ್ಳೇ ಅನುಭವಶಾಲಿಗಳಾಗಿದ್ದರೆಂದು ಹಿಂದೇಯೇ ಹೇಳಿರುವೆವಷ್ಟೇ ? ಅಲ್ಲದೆ, ಅವರು ಸಂಸ್ಕೃತ ಸಾಹಿತ್ಯ, ಸಂಗೀತ–ವೀಣೆ, ಫಿಟ್ಲು, ಮೃದಂಗವಾದನ ಮೊದಲಾದ ವಿದ್ಯೆಗಳಲ್ಲಿಯೂ ನಿಪುಣರಾಗಿದ್ದರು. ಇವರು ಪೂರ್ವದ ಮನೆಯಾದ ವೇಣೂರಲ್ಲೇ ಇದ್ದು ಅಲ್ಲಿಯ ಪೌರೋಹಿತ್ಯ, ಮಾನಮರ್ಯಾದೆಗಳನ್ನು ನಡಿಸಿಕೊಂಡು ಇರುತ್ತಿದ್ದರು. ಆಗ ಮೂಡಬಿದ್ರೆಯಲ್ಲಿ ಪ್ರತಿಷ್ಠಾಚಾರ್ಯರಾದ ಪುರೋಹಿತ ಪಾಚಪ್ಪಯಿಂದ್ರರೆಂದರೆ ಬಹಳ ಪ್ರಸಿದ್ಧಪಟ್ಟ ಮಹಾಪುರುಷ ! ಅವರು ಸತ್ಕುಲ ಪ್ರಸೂತರೂ, ಬಹುಸಂತಾನಸಂಪನ್ನರೂ, ಪಂಚಕಲ್ಯಾಣವಿಧಾನ, ಜ್ಯೋತಿಷ, ಮಂತ್ರವಾದ ಮೊದಲಾದ ವಿಷಯಗಳಲ್ಲಿ ಅದ್ವಿತೀಯ ಕುಶಲರೂ ಆಗಿದ್ದರು. ಅವರು ಮಹಾಪುರುಷರೆನ್ನುವುದಕ್ಕೆ ಅವರ ಸಂತತಿಯ ಒಟ್ಟು ಜನಸಂಖ್ಯೆ ೧೫೩ ಮಂದಿ! ಇದೊಂದು ನಿದರ್ಶನವೇ ಸಾಕು ! ಆದುದರಿಂದಲೇ ಮಹಾಕುಲಸಂಪನ್ನರಾಗಿದ್ದರು.

ಇವರ ಹೆಮ್ಮಕ್ಕಳಲ್ಲಿ ಶೀಲವತಿಯೂ, ಸದ್ಗುಣಸಂಪನ್ನೆಯೂ, ಪರೋಪಕಾರಿಣಿಯೂ ಆದ **'ಅಮೃತಮತಿ'** ಎಂಬ ಕನ್ನಿಕೆಯನ್ನು ವೇಣೂರು ಪಾಚಪ್ಪಯಿಂದ್ರರಿಗೆ ಕೊಟ್ಟು ಲಗ್ನವಾಗಿದ್ದಿತು. ಇವರೀರ್ವರೂ ಪಾಪಭೀರುಗಳಾಗಿ ಧರ್ಮಾರ್ಥಕಾಮಗಳನ್ನು ಸಾಧಿಸುತ್ತಾ, ಯೋಗ್ಯರೀತಿಯಿಂದ ಗೃಹಸ್ಥ ಜೀವನವನ್ನು ಪರಿಪಾಲಿಸುತ್ತಿದ್ದರು. ತನ್ಮಧ್ಯೆ ಲಗ್ನವಾದ ಮರುವರ್ಷದಲ್ಲಿ ಪಾಚಪ್ಪಯಿಂದ್ರರು ತಮ್ಮ ವೈದಿಕ ವೃತ್ತಿಗೆ ಸಂಸ್ಕೃತ ಶಿಕ್ಷಣವು ಅತ್ಯಾವಶ್ಯಕವೆಂದು ಬಗೆದು, ಸಂಸ್ಕೃತಾಭ್ಯಾಸಕ್ಕೆ ದಕ್ಷಿಣದೇಶದಲ್ಲಿ ಕೇಂದ್ರಸ್ಥಾನವೆನಿಸಿದ ಶ್ರವಣಬೆಳುಗುಳಕ್ಕೆ ಹೋಗಿ ಅಲ್ಲಿ ಕೆಲವು ವರ್ಷಗಳಿದ್ದು, ವೇದಮೂರ್ತಿಗಳಾದ ಮಹಾವಿದ್ವಾನ್ ಬ್ರಹ್ಮಸೂರಿ ಶಾಸ್ತ್ರಿಗಳಲ್ಲಿ ಸಂಸ್ಕೃತಶಿಕ್ಷಣವನ್ನು ಪಡೆದಿದ್ದರು. ಕೊನೆಗೆ ಅವರ ಪಿತೃವರ್ಯರಾದ ಗುಮ್ಮಣಯಿಂದ್ರರು ಅಲ್ಲಿಂದ ಅವರನ್ನು

ಕರಕೊಂಡು ಊರಿಗೆ ಬಂದರು. ಬಳಿಕ ಆ ದಂಪತಿಗಳಿಬ್ಬರೂ ಸುಖವಾಗಿರ ಲೊನ್ಮೆ ಅಮೃತಮತಿಯಮ್ಮನು ಪ್ರಥಮಗರ್ಭಿಣಿಯಾದ್ದರಿಂದ ಪುಂಸವನ ಪ್ರಮೋದ ಮತ್ತು ಸೀಮಂತವಿಧಿಗಳನ್ನು ಬಲು ವೈಭವದಿಂದ ಜರುಗಿಸಿದರು. ಬಳಿಕ ನವಮಾಸ ತುಂಬಲು ಶುಭಲಗ್ನ ಮತ್ತು ಶುಭಮುಹೂರ್ತದಲ್ಲಿ ಶಾ. ಶ. ೧೮೧೫ನೇ ಫಾಲ್ಗುಣ ಶು. ೬ ಯು ಭರಣೀ ನಕ್ಷತ್ರ ಬುಧವಾರದಂದು [ ಕ್ರಿ. ಶ. ೧೮೯೩ ನೇ ಮಾರ್ಚ ] ಸೂರ್ಯೋದಯ ಕಾಲದಲ್ಲಿ ಪೂರ್ವದಿಕ್ಕಿ ನಲ್ಲಿ ತೇಜಸ್ವಿಯಾದ ಸೂರ್ಯನು ಉದಯಿಸುವಂತೆ ಸೌ. ಅಮೃತಮತಿಯ ಮ್ಮನ ಗರ್ಭದಲ್ಲಿ **ಪುತ್ರರತ್ನ** ಉದಯವಾಯಿತು. **ಈ** ಆನಂದಕರವಾದ ವಾರ್ತೆ ಯು ಬಂಧುಗಳಿಗೆಲ್ಲ ಸಂತೋಷವನ್ನುಂಟು ಮಾಡುವುದಾಗಿದ್ದಿತು. ಪಾಚಪ್ಪ ಯಿಂದ್ರರೂ ಪುತ್ರನ ಪ್ರಾಪ್ತಿಯಿಂದ ಬಲು ಹರ್ಷವನ್ನು ಹೊಂದಿದರು.

**ಬಾಲ್ಯಜೀವನ:**—ಲೋಕದಲ್ಲಿ ಪ್ರತಿಯೊಬ್ಬನಿಗೂ ಬಾಲ್ಯಕಾಲದ ಸಂಸ್ಕಾರವು ತನ್ನ ಜೀವಮಾನದಲ್ಲಿ ಸುದೃಢವಾಗಿರುವುದು. ಬಾಲ್ಯದಲ್ಲಿಯೇ ತನ್ನ ಜೀವನದ ಉನ್ನತಿ ಮತ್ತು ಅವನತಿಗಳನ್ನು ಮಾಡಿಕೊಳ್ಳಬಹುದು. ಸತ್ಸಂ ಗತಿ, ಸತ್ಸಂಸ್ಕಾರ ಮತ್ತು ಸದುಪದೇಶ ಮೊದಲಾದುವುಗಳಿಂದ ಬಾಲಕನು ಯೋಗ್ಯನೂ ಸದಾಚಾರಸಂಪನ್ನನೂ ಪರೋಪಕಾರಿಯೂ ಆಗುವನು. ಬಾಲ್ಯ ಜೀವನದ ಏಳ್ಗೆಯು ಉತ್ತಮರಾದ ತಂದೆತಾಯಿಗಳನ್ನು ಹೊಂದಿಕೊಂಡಿರುತ್ತದೆ ದುರ್ಬುದ್ಧಿಯ ಬಾಲಕರನ್ನು ಸನ್ಮಾರ್ಗವಂತರನ್ನಾಗಿ ಮಾಡುವ ಭಾರವು ತಂದೆ ತಾಯಿಗಳನ್ನು ಅವಲಂಬಿಸಿಕೊಂಡಿದೆ. ಬಾಲ್ಯದಿಂದಲೇ ಸಂಸ್ಕಾರವನ್ನು ಹೊಂದಿದ ಬಾಲಕರು ಮುಂದಕ್ಕೆ ಲೋಕದಲ್ಲಿ ಪ್ರಸಿದ್ಧಪುರುಷರು, ಕೀರ್ತಿಸಂಪನ್ನರೂ, ಧರ್ಮಾತ್ಮರೂ, ಪರೋಪಕಾರಿಗಳೂ ಆಗುತ್ತಾರೆ.

**ಈ** ಬಾಲಕನಿಗೆ ಹದಿನಾರನೆಯ ದಿವಸದಲ್ಲಿ ನಾಮಕರಣ ಮತ್ತು ಆಂದೋಲಾರೋಪಣ ಸಂಸ್ಕಾರವಿಧಿಗಳನ್ನು ಮಾಡಿ '**ಲೋಕನಾಥ**' ನೆಂಬ ನಾಮಕರಣವನ್ನು ಮಾಡಿದರು. ಆಗೆ ಗುರುಹಿರಿಯರು ಸೌಭಾಗ್ಯವತಿಯರಾದ ಸ್ತ್ರೀಯರು ಮಂಗಲಾಶೀರ್ವಾದ ಶೋಭನಾದಿಗಳಿಂದ ಬಾಲಕನ ಉನ್ನತಿಯನ್ನು ಹಾರೈಸಿದರು. ಬಳಿಕ ಶುಕ್ಲಪಕ್ಷದ ಚಂದ್ರನಂತೆ ಈ ಬಾಲಕನು ದಿನೇ ದಿನೇ ಅಭಿವೃದ್ಧಿಯನ್ನು ಹೊಂದಿದನು. ಅನಂತರ ಮೂರನೆಯ ವಯಸ್ಸಿನಲ್ಲಿ ಚೌಲ ಕರ್ಮ ಸಂಸ್ಕಾರವನ್ನು ಮಾಡಿದರು.

ಕ್ರಿ. ಶ. ೧೮೯೬ ನೆಯ ನವಂಬರ ತಿಂಗಳಲ್ಲಿ ಪಾಚಪ್ಪಯಿಂದ್ರರು ಪತ್ನಿ-ಪುತ್ರ-ಕುಟುಂಬ ಸಮೇತರಾಗಿ ಊರ್ಜಯಂತಗಿರಿಯ ಯಾತ್ರೆಯನ್ನು ಮಾಡಿ ದರು. ಆಗ ಈ ಬಾಲಕನ ಸೌಂದರ್ಯ, ಚಟುವಟಿಕೆಗಳನ್ನು ಕಂಡು ಜನರು ಬಹಳವಾಗಿ ಪ್ರೀತಿಸುತ್ತಿದ್ದರು. ಬಳಿಕ ಸುಖವಾಗಿ ಶ್ರೀ ನೇಮೀಶ್ವರಸ್ವಾಮಿಯ ಪುಣ್ಯಕ್ಷೇತ್ರದ ದರ್ಶನವನ್ನು ಮಾಡಿಕೊಂಡು ಊರಿಗೆ ಬಂದನಂತರ ೫ ನೆಯ ವರ್ಷದಲ್ಲಿ ಅಕ್ಷರಾಭ್ಯಾಸ ವಿಧಿಯನ್ನು ನೆರವೇರಿಸಿದರು. ಈ ಭಾಗ್ಯಶಾಲಿಯಾದ ಪುತ್ರನಿಂದ ತಂದೆತಾಯಿಗಳು ಹೆಚ್ಚಿನ ಸಂತೋಷವನ್ನು ಹೊಂದಿದರು.

ಆ ಮೇಲೆ ಕ್ರಮವಾಗಿ ನೇಮಿರಾಜ, ಚಂದ್ರವತಿ, ಶ್ರೀದೇವಿ, ಸರಸ್ವತಿ ಮತ್ತು ವರ್ಧಮಾನ ಎಂಬಮಕ್ಕಳು ಜನಿಸಿದರು.

**ವಿದ್ಯಾರ್ಥಿಜೀವನಃ**—ಅನಂತರ ಇವರು ವೇಣೂರಿನ ಕನ್ನಡ ಶಾಲೆಗೆ ಸೇರಿಸಲ್ಪಟ್ಟು, ವಿದ್ಯಾಭ್ಯಾಸವನ್ನು ಮಾಡುತ್ತಾ ಕ್ರಮೇಣ ಕನ್ನಡ ಐದನೆಯಲ್ಲಿ ತೇರ್ಗಡೆ ಹೊಂದಿದರು. ಮಕ್ಕಳಿಗೆ ತಂದೆಗಿಂತಲೂ ತಾಯಿಯ ಸಂಸ್ಕಾರವು ವಿಶೇಷವಾಗಿರುವುದಾದರೂ, ಪಾಚಪ್ಪಯಿಂದ್ರರು ಸ್ವಯಂ ಸುಶಿಕ್ಷಿತರೂ ವಿದ್ಯಾ ಪ್ರೇಮಿಗಳೂ ಆಗಿದ್ದುದರಿಂದ ತನ್ನ ಮಕ್ಕಳಿಗೂ ಎಲ್ಲಾ ವಿಧದ ವಿದ್ಯೆಗಳನ್ನು ಕಲಿಸಬೇಕೆಂಬ ಹೆಬ್ಬಯಕೆ ಅವರಿಗೆ. ಆದುದರಿಂದಲೇ ಅವರ ಮಿತ್ರರೂ ಪೋಲೀಸ್ ಸಬ್ ಇನ್ಸ್ಪೆಕ್ಟರರೂ ಗೌಡಸಾರಸ್ವತರೂ ಆದ ಅಪ್ಪುರಾಯರು ಎಂಬವರಿಂದ ಇಂಗ್ಲೀಷು ಶಿಕ್ಷಣವನ್ನೂ, ಅವರ ಅಳಿಯಂದಿರಾದ ಆನಂದರಾಯರಿಂದ ಸಂಗೀತ—ಮೃದಂಗವಾದನದ ಅಭ್ಯಾಸವನ್ನೂ ಮಾಡಿಸುತ್ತಿದ್ದರು. ಅಲ್ಲದೆ ತನಗೆ ವೀಣಾವಾದನದಲ್ಲಿ ಅಭಿರುಚಿಯಿದ್ದುದರಿಂದ ಇವರಿಗೆ ವೀಣಾ ವಾದನವನ್ನೂ ಸ್ತೋತ್ರ, ಪೂಜಾವಿಧಿ, ಅಮರಕೋಶ ಮೊದಲಾದುವುಗಳನ್ನು ಕಲಿಸಿದ್ದರು. ನಾರಾವಿ ದೊಡ್ಡಬಸ್ತಿ ಆದಿರಾಜ ಯಿಂದ್ರರು ಅವರಿಗೆ ವೀಣಾ ವಿದ್ಯಾಗುರು; ಅವರಿಗೆ ಆಗಾಗ್ಯೆ ವೇಣೂರಿಗೆ ಬಂದು ವೀಣಾಭ್ಯಾಸವನ್ನು ಮಾಡಿಸುತ್ತಿದ್ದರು. ಅಲ್ಲದೆ ಪೂಜಾವಿಧಿ, ಜ್ಯೋತಿಷ ಮೊದಲಾದ ಪಾಠಗಳನ್ನು ಕಲಿಯುವರೇ ಅನೇಕಕಡೆಗಳಿಂದ ಹಲವು ವಿದ್ಯಾರ್ಥಿಗಳು ಬಂದು ಸೇರುತ್ತಿದ್ದರು. ಇವರ ತಂದೆಯವರು ಪರೋಪಕಾರಿಗಳೂ ಉದಾರ ಮನಸ್ಸಿನವರೂ ಆಗಿದ್ದುದರಿಂದ ಹಲವಾರು ಬಡವಿದ್ಯಾರ್ಥಿಗಳಿಗೆ ಅನ್ನವಸ್ತ್ರಗಳನ್ನು ಕೊಟ್ಟು ವಿದ್ಯಾಭ್ಯಾಸವನ್ನು ಮಾಡಿಸುತ್ತಿದ್ದರು. ಆಗ ಸುಮಾರು ಹತ್ತಿಪ್ಪತ್ತು ಮಂದಿ ವಿದ್ಯಾರ್ಥಿಗಳು ಇರುತ್ತಿದ್ದರು. ಆಗ ಅವರ ಮನೆಯು ಅದೊಂದು ಚಿಕ್ಕ ವಿದ್ಯಾ ಸಂಸ್ಥೆಯಾಗಿತ್ತೆಂದರೆ ಅತಿಶಯೋಕ್ತಿಯಾಗದು- ಇರಲಿ.

ಆದರೆ ಪಾಚಪ್ಪಯಿಂದ್ರರು ತನ್ನ ಮಗನು ಕನ್ನಡ, ಇಂಗ್ಲೀಷು, ಸಂಗೀತ ಮೊದಲಾದ ಲೌಕಿಕ ವಿದ್ಯಾವಂತನಾದರೆ ಸಾಕೆಂದು ಬಗೆಯಲಿಲ್ಲ. ಪರಂತು ತಮ್ಮ ಕುಲವೃತ್ತಿಯಾದ ಪೂಜಾವಿಧಿಗಳನ್ನೂ ಭಕ್ತಾಮರ ಮುಂತಾದ ಸ್ತೋತ್ರಗಳನ್ನೂ, ಸಂಸ್ಕೃತಾಭ್ಯಾಸಕ್ಕೆ ಅನುಕೂಲವಾಗುವಂತೆ ಮೂರು ಕಾಂಡ ಅಮರಕೋಶವನ್ನೂ ಶಬ್ದ-ಧಾತುರೂಪಾವಲಿಗಳನ್ನೂ ಅರ್ಥಸಹಿತವಾಗಿ ಪಾಠ ಹೇಳಿದ್ದರು. ಬಳಿಕ ಕ್ರಿ. ಶ. ೧೯೦೪ ನೇ ದಶಂಬರ ಮಾರ್ಗಶಿರ ಮಾಸದಲ್ಲಿ ಉಪನಯನ ಸಂಸ್ಕಾರವನ್ನು ನೆರವೇರಿಸಿದರು. ಆಗಳಿನ ಕಾಲದಲ್ಲಿಯೂ ಅದಕ್ಕಾಗಿ ಸುಮಾರು ೫೦೦ ರುಪ್ಯಾವೆಚ್ಚಕ್ಕೆ ಕಮ್ಮಿಯಾಗಲಾರದು. ಪಾಚಪ್ಪ ಇಂದ್ರರಲ್ಲಿ ಒಂದು ದುರ್ಗುಣವೆಂದರೆ ಮುಂಗೋಪ ! ಅದು ಕೂಡ ತಾತ್ಕಾಲಿಕ ! ಪುನರಪಿ ಕರೆದು ಮಾತನಾಡಿಸುವ ಸ್ವಭಾವ ಅವರದು ! 'ಊರಿಗೆ ಉಪಕಾರಿ ಮನೆಗೆ ಮಾರಿ' ಎಂಬಂತೆ ಮನೆಯವರಿಗೆ ಎಷ್ಟು ತೊಂದರೆ ಕಷ್ಟವನ್ನು ಕೊಟ್ಟರೂ,

ಇತರರಿಗೆ ಉಪಕಾರವನ್ನು ಮಾಡಬೇಕೆಂದು ಅವರ ಇಚ್ಛೆ! ಅವರ ಜೀವಮಾನದಲ್ಲಿ ಪಾಚಪ್ಪಯಿಂದ್ರರೆಂದರೆ ಎಲ್ಲರಿಗೂ ಬಲುಪ್ರೇಮ; ಮತ್ತು ಅವರಲ್ಲಿ ವಿಶೇಷವಾದ ಭಕ್ತಿ! ಕ್ರಿ. ಶ. ೧೯೦೬ ರಲ್ಲಿ ಮೂಡಬಿದ್ರೆಯಲ್ಲಿ ಸಂಸ್ಕೃತ ಪಾಠಶಾಲೆಯು ಸ್ಥಾಪನೆಯಾಗಿದ್ದಿತು. ನಂತರ ಪಾಚಪ್ಪಯಿಂದ್ರರು ತಮ್ಮ ಮಕ್ಕಳಿಗೂ ಸಂಸ್ಕೃತ ಉಚ್ಚ ಶಿಕ್ಷಣವನ್ನು ಕೊಡಿಸಬೇಕೆಂಬ ಬಯಕೆಯಿಂದ ಶ್ರ. ಬೆಳಗುಳಕ್ಕೆ ಇವರನ್ನೂ ಇವರ ತಮ್ಮನಾದ ನೇಮಿರಾಜನನ್ನೂ ಕರಕೊಂಡು ಕುಟುಂಬಸಮೇತರಾಗಿ ಯಾತ್ರೆಗಾಗಿ ಪಯಣ ಮಾಡಿದರು. ಅಲ್ಲಿ ಹೋಗಿ ಶ್ರೀ ಬಾಹುಬಲಿ ಸ್ವಾಮಿಯವರ ದರ್ಶನವಾದನಂತರ ವೇದಮೂರ್ತಿಗಳಾದ ಮಹಾ ಆಸ್ಥಾನ ವಿದ್ವಾನ್ ದೋರ್ಬಲಿ ಶಾಸ್ತ್ರಿಗಳಲ್ಲಿಗೆ ಹೋಗಿ, ತನ್ನ ಮಕ್ಕಳನ್ನು ಇಲ್ಲಿಯ ಗೀರ್ವಾಣ ಭಾಷೋಜ್ಜೀವಿನೀ ಪಾಠಶಾಲೆಗೆ ಸೇರಿಸಿಕೊಳ್ಳಬೇಕೆಂದು ಪ್ರಾರ್ಥಿಸಿಕೊಂಡರು. ಆಗ ಶಾಸ್ತ್ರಿಗಳು ಇವರನ್ನು ಪರೀಕ್ಷಿಸಿ ಮೂರನೆಯ ದರ್ಜೆಗೂ ಇವರ ತಮ್ಮನನ್ನು ಮೊದಲನೆಯ ದರ್ಜೆಗೂ ಸೇರಿಸಿಕೊಳ್ಳಬಹುದೆಂದು ಅಭಯವಿತ್ತರು.

ಈ ರೀತಿಯಾಗಿ ತನ್ನ ಮಕ್ಕಳನ್ನು ಸಂಸ್ಕೃತವಿದ್ಯಾಭ್ಯಾಸಕ್ಕೆ ಅನುಕೂಲಪಡಿಸಿ ಅಲ್ಲಿಯೇ ಬಿಟ್ಟು ತಾನು ಕುಟುಂಬಸಹಿತರಾಗಿ ಸಮ್ಮೇದಶಿಖರಜಿಯ ಯಾತ್ರೆಗೆ ಪ್ರಯಾಣ ಮಾಡಿದರು. ಆಗ ಅಮೃತಮತಿಯಮ್ಮನು ಏಳುತಿಂಗಳ ಗರ್ಭಿಣಿ! ಆ ಗರ್ಭಭಾರವನ್ನು ಸಹಿಸಿಕೊಂಡು ಆ ಪುಣ್ಯಕ್ಷೇತ್ರದ ದರ್ಶನವನ್ನು ಮಾಡಬೇಕೆಂಬ ಬಯಕೆಯಿಂದ ಅಲ್ಲಿಗೆ ಹೋಗಿ ದರ್ಶನ ಮಾಡಿಕೊಂಡು ವಾಪಾಸು ಬರುವಾಗ ಕಾಶಿಗೆ ಬಂದರು. ಅಲ್ಲೊಂದು ಫಂಡರ ಯಾನೆ ಬ್ರಾಹ್ಮಣರಲ್ಲಿ ಬಿಡಾರ ಮಾಡಿಕೊಂಡು ಏಳೆಂಟು ದಿವಸಗಳಿದ್ದರು. 'ಕಾಶಿಯ ಗಯಾಳರು' ಎಂಬ ಮಾತು ಪ್ರಸಿದ್ಧವಿದೆಯಷ್ಟೇ? ಆದರೆ ಕರ್ಮದ ಉದಯವು ತೀವ್ರವಾಗಿರುವಾಗ ಯಾರೇನು ಮಾಡಲೂ ಸಾಧ್ಯವಿಲ್ಲ! ಆಗ ಪಾಚಪ್ಪಯಿಂದ್ರರು ಅಲ್ಲೋರ್ವ ಫಂಡನ ಬಲೆಗೆ ಸಿಲುಕಿದವರಾಗಿ ಅವನು 'ನಿಮಗೆ ಮುಂಬಯಿಗೆ ಹೋಗುವರೇ ರೈಲ್ವೆ ಟಿಕೇಟು ತಂದು ಕೊಡುತ್ತೇನಂದ ಮೇರೆಗೆ ಅವನ ಹತ್ತಿರ ಅರುವತ್ತು ರೂಪ್ಯಾಗಳನ್ನು ಕೊಟ್ಟಿದ್ದರೆಂದೂ, ಅವನು ವಾಪಾಸು ಕೊಡಲಿಲ್ಲನೆಂದೂ, ಕೊನೆಗೊಂದು ದಿವಸ ಗಂಗಾನದಿಗೆ ಸ್ನಾನಕ್ಕೆ ಹೋದವರು ವಾಪಾಸು ಬಿಡಾರಕ್ಕೆ ಬರಲಿಲ್ಲನೆಂದೂ ಕೇಳುವಾಗ ಎಂತಹ ಕಠೋರ ಹೃದಯನೂ ಕಂಬನಿಯಿಕ್ಕದಿರಲಾರನು. ಆದರೆ ಮಾಡುವುದೇನು? 'ವಿಧಿಹರಹೋ ಬಲವಾನಿತಿ ಮೇ ಮತಿಃ' ಆ ಫಂಡನೇ ಇವರ ಮರಣಕ್ಕೆ ಕಾರಣನೋ? ಅಂತು ಇದೊಂದು ಎಲ್ಲರಿಗೂ ಆಶ್ಚರ್ಯ ಮತ್ತು ದುಃಖಕರವಾದ ವಾರ್ತೆ!

ಮರಣಕ್ಕೆ ಅವರವರ ಆಯುಷ್ಯಕರ್ಮದ ಅವಸಾನವೇ ಅಂತರಂಗಕಾರಣವಾದರೂ, ಬಾಹ್ಯಕಾರಣಗಳೂ ನಿಮಿತ್ತಗಳಾಗುತ್ತವೆ ಎಂಬುದು ಶಾಸ್ತ್ರನಿಯಮ. ಗರ್ಭದಲ್ಲಿರುವ ಬಾಲಕನ ಪುಣ್ಯಪಾಪಗಳೂ ಶುಭಾಶುಭಫಲಗಳನ್ನು ಕೊಡು

ತ್ತವೆ. ಅಂತೆಯೇ ಆಗ ಅನ್ನ್ಯತಮತಿಯಮ್ಮನ ಗರ್ಭದಲ್ಲಿದ್ದ ಬಾಲಕನ ಅಶುಭ ಕರ್ಮದ ಉದಯದಿಂದಲೋ ಎಂಬಂತೆ ಎಂಟು ತಿಂಗಳ ಗರ್ಭಿಣಿಗೆ ಇಂತಹ ಸಂಕಷ್ಟಬಂದೊದಗಿತು ! ಯಾರೊಡನೆಯಾದರೂ ಮಾತನಾಡಿ ಹುಡುಕಿಸುವೆ ನೆಂದರೆ ಹಿಂದೀಭಾಷೆ ತಿಳಿಯದಿರುವದೊಂದು ಕಷ್ಟ ! ಕೊನೆಗೆ ಈ ದಕ್ಷಿಣದೇಶ ಸ್ಥರಾದ ಆರ್ದೋರ್ವ ಅರ್ಜಿಕಾಬಾಯಿಜಿಯವರು ಅಲ್ಲಿಯ ಧರ್ಮಾತ್ಮರಿಗೆ ಬೋಧಿಸಿ, ಧರ್ಮಸಹಾಯವನ್ನು ಮಾಡಿಸಿ, ಶ್ರವಣಬೆಳಗುಳಕ್ಕೆ ಕಳುಹಿಸಿ ಕೊಟ್ಟರು. ಆಗ ಈ ದುರ್ವಾರ್ತೆಯನ್ನು ಕೇಳಿ, ಸಿಡಿಲು ಬಡಿದವರಂತೆ ಹೆಚ್ಚಿನ ದುಃಖಕ್ಕೊಳಗಾದರು ಅವರ ಮಕ್ಕಳು ! ಕೊನೆಗೆ ಉಪಾಯವಿಲ್ಲದೆ, ಚಿಂತಿಸಿ ಫಲವಿಲ್ಲ ! ಬಂದ ಕಷ್ಟವನ್ನು ಅನುಭವಿಸಿಯೇ ತೀರಬೇಕು. ದೇವರೇ ಗತಿ ! ಎಂದು ಬಗೆದು, ತಾಯಮ್ಮನವರನ್ನು ಊರಿಗಾದರೂ ಕಳುಹಿಸುವ ಉಪಾಯ ವೆಂತು ? ಹಣದ ಅಭಾವ ! ಎಂದು ಯೋಚಿಸಿ, ನಮ್ಮ ಕಥಾನಾಯಕರು ತನ್ನ ಕೈಯ್ಯಲ್ಲಿದ್ದ ಚಿನ್ನದ ಬಳೆಯನ್ನು ಸುಮಾರು ೫೦ ರೂಪ್ಯಾಗಳಿಗೆ ವಿಕ್ರ ಯಿಸಿ, ತನ್ನ ತಮ್ಮನಾದ ನೇಮಿರಾಜನನ್ನೂ ಮಾವನಾದ ಪದ್ಮಯ್ಯಯಿಂದ್ರ ರನ್ನೂ ಜತೆಮಾಡಿ ತಾಯಮ್ಮನವರನ್ನು ಮೂಡಬಿದ್ರೆಗೆ ಕಳುಹಿಸಿದರು.

ಬಳಿಕ ನವಮಾಸ ತುಂಬಲು ಪುತ್ರರತ್ನವನ್ನು ಪಡೆದರು. ಅವನಿಗೆ ವೈದಿ ಕರೀತಿ ಜಾತಕರ್ಮಾದಿ ಸಂಸ್ಕಾರಗಳನ್ನು ಮಾಡಿ **ವರ್ಧಮಾನ** ನೆಂಬ ನಾಮ ಕರಣವನ್ನು ಮಾಡಿದರು.

ಆ ಮೇಲೆ ಇಂತಹ ಪಿತೃವಿಯೋಗಜನ್ಯನಾದ ಅಸಹ್ಯವೇದನೆಯನ್ನು ಸಹಿಸಿಕೊಂಡು, ತನ್ನ ವಿದ್ಯೋನ್ನತಿಯನ್ನು ಮಾಡಲುದ್ಯುಕ್ತರಾದರು.

ಆಗ ಈಗಳಿನಂತೆ ಶ್ರವಣಬೆಳ್ಗುಳದಲ್ಲಿ ವಿದ್ಯಾರ್ಥಿಗಳಿಗೆ ಬೋರ್ಡಿಂಗಿನ ವ್ಯವಸ್ಥೆಯಿರಲಿಲ್ಲ. ಕೆಲವರು ಒಬ್ಬೊಬ್ಬ ಶ್ರೀಮಂತರ ಮನೆಯಲ್ಲಿಯೂ, ಕೆಲ ವರು ವಾರಕ್ಕೆ ಒಂದಾವರ್ತಿ ಒಂದು ಮನೆಯ ಸರ್ತಿ ಬರುವಂತೆ ವಾರದ ಮನೆ ಗಳಲ್ಲಿಯೂ ಊಟ ಮಾಡಿಕೊಂಡು ವಿದ್ಯಾಧ್ಯಯನವನ್ನು ಮಾಡುವ ಪದ್ಧತಿ ಯಿದ್ದಿತು. ಲೋಕನಾಥರಿಗೆ ಅವರ ಪುಣ್ಯೋದಯದಿಂದ ಶ್ರೀಯುತರಾದ ಭುಜ ಬಲಿ ಪಾರ್ಶ್ವನಾಥಯ್ಯನವರೆಂಬ ಸಾಹುಕಾರರ ಮನೆಯಲ್ಲಿಯೇ ಭೋಜನದ ವ್ಯವಸ್ಥೆ ಮಾಡಿದ್ದರು. ಅವರು ಪುತ್ರವಾತ್ಸಲ್ಯದಿಂದ ಇವರಿಗೆ ಅನ್ನವಸ್ತ್ರಗಳನ್ನು ಕೊಟ್ಟು ಕಾಪಾಡುತ್ತಿದ್ದರು. ಅಂತು ಆಗ ಅಲ್ಲಿಯ ಇತರ ವಿದ್ಯಾರ್ಥಿಗಳಂತೆ ಭೋಜನದ ವ್ಯವಸ್ಥೆಯಲ್ಲಿ ಕುಂದು–ಕೊರತೆಗಳಿರಲಿಲ್ಲ.

ಇನ್ನು ವಿದ್ಯಾಭ್ಯಾಸದ ಮಟ್ಟಿಗೂ ಹೆಚ್ಚಿನ ತೊಂದರೆಗಳಿರಲಿಲ್ಲ. ಶ್ರೀ.ವೇ. ದೋರ್ಬಲಿ ಶಾಸ್ತ್ರಿಗಳು .ಸಂಗೀತಪ್ರಿಯರು ! ಆಗ ಫಿಡ್ಲುವಾದನದ ಅಭ್ಯಾಸ ವನ್ನು ಮಾಡುತ್ತಿದ್ದರು. ಆಗ ಲೋಕನಾಥರು ವೀಣೆ ಬಾರಿಸುವದನ್ನು ಕಂಡು ಶಾಸ್ತ್ರಿಗಳಿಗೆ ಇವರಲ್ಲಿ ಹೆಚ್ಚಿನ ಪ್ರೇಮ ! ತಾನು ಫಿಡ್ಲಿನಲ್ಲಿ ಅಭ್ಯಾಸ ಮಾಡಿದ ವರ್ಣ–ಕೃತಿ ಮೊದಲಾದುವುಗಳನ್ನು ಇವರಿಗೆ ವೀಣೆಯಲ್ಲಿ ಬಾರಿಸುವಂತೆ

ಹೇಳಿ ಕೊಡುತ್ತಿದ್ದರು. ಅಲ್ಲದೆ, ಸಂಸ್ಕೃತವನ್ನೂ ಚೆನ್ನಾಗಿ ಹೇಳಿಕೊಡುತ್ತಿದ್ದರು. ಇವರು ತನ್ನ ಕೈಲಾದ ಮಟ್ಟಿಗೆ ಗುರುಶುಶ್ರೂಷೆಯನ್ನೂ ಮಾಡುತ್ತಿದ್ದರು.

**ಗುರು ಶುಶ್ರೂಷಯಾ ವಿದ್ಯಾ ಪುಷ್ಕಲೇನ ಧನೇನ ವಾ ||**
**ಅಥವಾ ವಿದ್ಯಯಾ ವಿದ್ಯಾ ಚತುರ್ಥಂ ನೋಪಲಭ್ಯತೇ ||**

ಎಂಬೀ ನೀತಿಯಂತೆ ವಿದ್ಯಾಪ್ರಾಪ್ತಿಗೆ ಮೂರು ದಾರಿ; ಗುರುಗಳ ಸೇವೆಯನ್ನು ಮಾಡಿ ವಿದ್ಯೆಯನ್ನು ಗಳಿಸುವುದು ಒಂದು; ಹೆಚ್ಚಾದ ದ್ರವ್ಯವ್ಯಯವನ್ನು ಮಾಡಿ ವಿದ್ಯಾಸಂಪಾದನೆಯನ್ನು ಮಾಡಿಕೊಳ್ಳುವುದು ಇನ್ನೊಂದು ! ಅಥವಾ ಹೆಚ್ಚಿನ ವಿದ್ಯಾವಂತನು ತನ್ನ ವಿದ್ಯೋಪದೇಶವನ್ನು ಮಾಡಿ ಬೇರೆಯವನಿಂದ ಇನ್ನೊಂದು ವಿದ್ಯೆಯನ್ನು ಕಲಿಯುವುದು ಮತ್ತೊಂದು. ಹೀಗೆ ಮೂರು ಉಪಾಯಗಳಿಂದ ವಿದ್ಯಾರ್ಜನೆಯನ್ನು ಮಾಡಿಕೊಳ್ಳಬಹುದು. ನಾಲ್ಕನೆಯ ಉಪಾಯವಿಲ್ಲವೆಂದು ನೀತಿಕಾರರ ಅಭಿಪ್ರಾಯ. ಆದುದರಿಂದ ದೋರ್ಬಲಿ ಜಿನದಾಸ ಶಾಸ್ತ್ರಿಗಳಿಗೆ ಹೆಚ್ಚಿನ ಪ್ರೇಮವುಂಟಾಗುವುದಕ್ಕೆ ಇವರ ಗುರುಸೇವೆ, ಭಕ್ತಿ, ವಿನಯ ಮೊದಲಾದುವು ಕಾರಣವಾಗಿದ್ದುವು. ಆಗಳಿನ ವಿದ್ಯಾರ್ಥಿಗಳ ಗುರುಸೇವೆಯನ್ನು ಬಲುಭಕ್ತಿಯಿಂದ ಮಾಡುತ್ತಿದ್ದರು.

ಈ ರೀತಿಯಾಗಿ ಸುಮಾರು ಆರು ವರ್ಷಗಳ ಕಾಲ ಸಂಸ್ಕೃತ ಸಾಹಿತ್ಯದಲ್ಲಿ ಮೈಸೂರು ಅರಮನೆಯ ಸಂಸ್ಕೃತ ಕಾಲೇಜಿನಲ್ಲಿ ಪರೀಕ್ಷೆ ಕೊಟ್ಟು ತೇರ್ಗಡೆಯನ್ನು ಹೊಂದಿದರು. ಬಳಿಕ ಪೂಜ್ಯ ಗುರುವರ್ಯರಾದ ನೇಮಿಸಾಗರ ಸ್ವಾಮಿಯವರ ಸತ್ಸಂಗತಿಯು ಪ್ರಾಪ್ತವಾದುದರಿಂದ ಅವರಿಂದ ರತ್ನಕರಂಡಕ ದ್ರವ್ಯಸಂಗ್ರಹ ಮತ್ತು ತತ್ವಾರ್ಥಸೂತ್ರಗಳೆಂಬ ಧರ್ಮಗ್ರಂಥಗಳನ್ನು ಓದಿ ಮೈಸೂರಲ್ಲಿ ಮುಂಬಯಿ ಪರೀಕ್ಷೆಯನ್ನು ಕೊಟ್ಟರು.

ಆ ಮೇಲೆ ಅವರ ಕರ್ಮಗತಿಗನುಸಾರವಾಗಿ ಶ್ರ. ಬೆಳ್ಗೊಳ ಮತ್ತು ಮೈಸೂರು ಬಿಡುವ ಪ್ರಸಂಗ ಬಂದೊದಗಿದುದರಿಂದಲೂ, ಇಲ್ಲಿ ಜೈನಾಗಮದ ಅಭ್ಯಾಸಕ್ಕೆ ಹೆಚ್ಚಿನ ಸೌಕರ್ಯವಿಲ್ಲದಿದ್ದರಿಂದಲೂ ಕ್ರಿ. ಶ. ೧೯೧೮ ನೇ ನವಂಬರ ತಾ. ೧೦ ರಲ್ಲಿ ಸೋಲಾಪುರಕ್ಕೆ ಹೋಗಿ ಅಲ್ಲಿಯಾದರೂ ಅಭ್ಯಾಸ ಮಾಡಬೇಕೆಂದು ಪ್ರಯತ್ನ ಪಟ್ಟರೂ ಅಲ್ಲಿಯ ಆಗಳಿನ ಕಾರ್ಯದರ್ಶಿಯವರಾದ ಶ್ರೀ ಹೀರಾಚಂದ ನೇಮಚಂದ ದೋಶಿಯವರು ' ನಿಮಗೆ ಕನ್ನಡ ವಿನಹ ಇತರ ಯಾವ ಭಾಷೆಯೂ ಬಾರದಿರುವುದರಿಂದ ನಿಮ್ಮನ್ನು ಇಲ್ಲಿಯ ಶಾಲೆಗೆ ಸೇರಿಸಲಾಗುವದಿಲ್ಲವೆಂದು ' ನಿರಾಕರಿಸಿದರು. ಕೊನೆಗೆ ನಿರುತ್ಸಾಹರಾಗಿ ಆಗ ಅಲ್ಲಿ ಸಂಸ್ಕೃತಾಧ್ಯಾಪಕರಾಗಿದ್ದ ಪಂ. ವಂಶೀಧರ ಶಾಸ್ತ್ರಿಗಳಲ್ಲಿಗೆ ಹೋಗಿ ಅವರೊಡನೆ ಸಂಸ್ಕೃತಭಾಷೆಯಲ್ಲಿಯೇ ಸಂಭಾಷಿಸಿ, ತನ್ನ ಅಭಿಪ್ರಾಯವನ್ನು ಸೂಚಿಸಿದರು. ಅದಕ್ಕೆ ಶಾಸ್ತ್ರಿಗಳು ಸಂತೋಷಪಟ್ಟು ಇವನಂತಹ ಸಾಹಿತ್ಯಜ್ಞಾನವುಳ್ಳ ವಿದ್ಯಾರ್ಥಿಗಳು ನಮ್ಮ ಪಾಠಶಾಲೆಯಲ್ಲಿಲ್ಲ. ಇವನಿಗೆ ಸಂಸ್ಕೃತಭಾಷೆಯಲ್ಲಿಯೇ

ಪಾಠ ಹೇಳುವೆನು, ಇವನನ್ನು ಅವಶ್ಯವಾಗಿ ಸೇರಿಸಿಕೊಳ್ಳಬಹುದು" ಎಂದು ಕಾರ್ಯದರ್ಶಿಯವರಿಗೆ ತಿಳಿಸಿದರು.

ಆ ಮೇಲೆ ಆ ಶಾಸ್ತ್ರಿಗಳ ಮತ್ತು ಸಹಪಾಠಿಗಳಾದ ಶ್ರೀ ರಾವಜೀ ಸಖಾರಾಮ ದೋಶಿಯವರ ಪ್ರೇರಣೆಯಿಂದ ಇವರನ್ನು ವಿಶಾರದ ದರ್ಜೆಗೆ ಸೇರಿಸಿದರು. ಶಾಲೆಗೆ ಸೇರಿ ಗುರುಗಳ ಅನುಗ್ರಹದಿಂದ ೨ ವರ್ಷಗಳ ಪಾಠಗಳನ್ನು ಒಂದೇ ವರ್ಷದಲ್ಲಿ ಅಭ್ಯಾಸಿಸಿ ಉತ್ತಮ ಶ್ರೇಣಿಯಲ್ಲಿ ತೇರ್ಗಡೆಯನ್ನು ಹೊಂದಿದರು. ಆ ವರ್ಷ ಸುಮಾರು ೨೫ ರೂಪ್ಯಾಗಳ ಬಹುಮಾನವು ದೊರೆತಿದ್ದಿತು. ಆಗ ಶ್ರೀ ಹೀರಾಚಂದಜೀಯವರು ಮತ್ತು ರಾವಜಿಯವರಿಗೆ ಇವರ ಮೇಲೆ ಹೆಚ್ಚಿನ ಪ್ರೇಮವುಂಟಾಗಿ ಅನ್ನವಸ್ತ್ರಗಳ ವ್ಯವಸ್ಥೆ ವಿನಹ ಪ್ರತಿತಿಂಗಳಲ್ಲಿ ೪ ರೂಪ್ಯಾಗಳಂತೆ ಸ್ಕಾಲರ್‌ಶೀಪನ್ನು ಕೊಡುವ ವ್ಯವಸ್ಥೆಯನ್ನು ಮಾಡಿದರು.

### ವಿದ್ಯಾರ್ಥಿಜೀವನದಲ್ಲಿ ನೋಟುಬುಕ್ಕಿನಲ್ಲಿ ಬರೆದಿಟ್ಟ ಕೆಲವು ವಿಷಯುಗಳು.

"ಓ ಪರಮೇಶ್ವರಾ! ನನ್ನ ಶರೀರವು ದಿನೇ ದಿನೇ ಕೃಶವಾಗುತ್ತಿದೆ! ಇಂತಹ ದುರ್ಬಲವಾದ ಶರೀರದಿಂದ ನಾನು ಧರ್ಮೋನ್ನತಿಯನ್ನು ಮಾಡುವದೆಂತು? ಅದಕ್ಕಾಗಿ ನನ್ನ ಶರೀರವು ಪ್ರಯೋಜನವಾಗದು! ನಾನು ಪ್ರಸಿದ್ಧಿಗೆ ಬರುವುದು ಹೇಗೆ? ಸಾಮಾಜಿಕ ಸೇವೆಯನ್ನು ಹೇಗೆ ಮಾಡಲಿ! ನನಗೆ ಮಾತನಾಡುವುದಕ್ಕೂ ಬರುವುದಿಲ್ಲ! ಏನು ಮಾಡಲಿ! ನನ್ನ ಜನ್ಮ ನಿರರ್ಥಕ! ............................ಆಹಾ! ನಾನು ಪೂರ್ವಜನ್ಮದಲ್ಲಿ ಸುಕೃತವನ್ನು ಮಾಡದಿರುವ ಫಲವಿದು! ಆದ್ದರಿಂದ ನಾನೀಗ ವಿದ್ಯಾಹೀನನೂ ದರಿದ್ರನೂ ದುಃಖಿಯೂ ಆಗಿದ್ದೇನೆ. ಆಹಾ! ನನ್ನ ದುರ್ದೈವವೇ! ನಾನು ಈ ಸಂಸಾರದಿಂದ ಹೇಗೆ ವಿರಕ್ತನಾಗಲಿ? ನನ್ನ ತಾಯಿಯವರು ಊರಿಗೆ ಬರಬೇಕೆಂದು ಪತ್ರ ಬರೆಯಿಸಿದ್ದಾರೆ. ಅವರು ನಾನು ಬರಲಿಲ್ಲವೆಂದು ಎಷ್ಟು ಚಿಂತೆಯಲ್ಲಿದ್ದಾರೆಯೋ ಅವರಿಗೆ ಊರಲ್ಲಿ ಎಷ್ಟು ತೊಂದರೆಗಳಿವೆಯೋ! ನನ್ನ ವಿದ್ಯಾಭ್ಯಾಸವಿನ್ನೂ ಪೂರ್ತಿಯಾಗಲಿಲ್ಲ! ಈ ಸಂಸಾರ ಅಸ್ಥಿರ ಮತ್ತು ದುಃಖಮಯ! ನಾನು ಇನ್ನು ಮುಂದಕ್ಕೆ ಈ ಸಂಸಾರದಲ್ಲಿ ಎಷ್ಟು ಕಷ್ಟಗಳನ್ನು ಅನುಭವಿಸಲಿದೆಯೋ! ದೇವರೇ ಬಲ್ಲ!...........................ಇತ್ಯಾದಿ ಭಾವನೆಗಳನ್ನು ಮಾಡುತ್ತಿದ್ದರು.

ಅಲ್ಲದೆ ಪ್ರತಿನಿತ್ಯವೂ ದೇವದರ್ಶನ, ಪ್ರತಿಕ್ರಮಣ, ಸ್ವಾಧ್ಯಾಯ, ಪಂಚಾಣುವ್ರತ ಮೊದಲಾದ ವ್ರತ-ನಿಯಮಗಳನ್ನು ಮಾಡುತ್ತಿದ್ದರು.

ಈ ರೀತಿಯಾಗಿ ಸೋಲಾಪುರದಲ್ಲಿ ವಿಶಾರದ ಅಂತಿಮ ದರ್ಜೆಯ ಗೊಮ್ಮಟಸಾರ ಮೊದಲಾದುವುಗಳನ್ನು ಅಭ್ಯಾಸ ಮಾಡುತ್ತಿರುವಾಗ ಅಕಸ್ಮತ್ತಾಗಿ ಪ್ಲೇಗು ಊರಲ್ಲೆಲ್ಲ ವ್ಯಾಪಿಸಿತು. ಆಗ ಇವರು ಊರಿಗೆ ಹೋಗಲು ಸಮ್ಮತಿಸಲಿಲ್ಲ. ಕೊನೆಗೆ ಮಂತ್ರಿಯವರು ಕ್ರಿ. ಶ. ೨೬—೧೦—೧೯೧೪ ರಲ್ಲಿ

ಮೊರೇನಾ ವಿದ್ಯಾಲಯಕ್ಕೆ ಕಳುಹಿಸಿಕೊಟ್ಟರು. ಅಲ್ಲಿ ವೈದ್ಯ ಕೆ. ಆದಿರಾಜ ಶಾಸ್ತ್ರಿಗಳು, ಬಿ. ಶಾಂತಿರಾಜ ಶಾಸ್ತ್ರಿಗಳು ಮತ್ತು ಏ. ಶಾಂತಿರಾಜ ಶಾಸ್ತ್ರಿಗಳು ಮೊದಲಾದ ನಮ್ಮೂರ ಸಹಪಾಠಿಗಳ ಜೊತೆಯಲ್ಲಿ ಶಾಸ್ತ್ರೀಯ ದರ್ಜೆಯ ಉಚ್ಚ ಶಿಕ್ಷಣಕ್ಕೆ ಹೆಚ್ಚಿನ ಅನುಕೂಲವು ದೊರೆಯಿತು. ಆಗ ಅಲ್ಲಿ ಪಂಡಿತ ವಿದ್ಯಾವಾರಿಧಿ ಗೋಪಾಲದಾಸಜೀ ಶಾಸ್ತ್ರಿ ಬರ್ರೈಯಾ ಇವರ ಸಂಪರ್ಕದಿಂದ ಗೋಮಟಸಾರ ಕರ್ಮಕಾಂಡ, ರಾಜವಾರ್ತಿಕ, ಪ್ರಮೇಯಕಮಲ ಮಾರ್ತಂಡ ಮೊದಲಾದ ಗ್ರಂಥಗಳ ಅಭ್ಯಾಸವನ್ನು ಮಾಡಿದರು. ಪಂ. ನ್ಯಾಯಾಚಾರ್ಯ ಮಾಣಿಕಚಂದಜಿಯವರು ನ್ಯಾಯಗ್ರಂಥಗಳನ್ನೂ ಪಂ. ವಂಶೀಧರಜೀ ಶಾಸ್ತ್ರಿಯ ವರು ಸಿದ್ಧಾಂತ ಗ್ರಂಥಗಳನ್ನೂ, ಪಂ. ದೇವಕೀನಂದನಜೀ ಶಾಸ್ತ್ರಿಯವರು ಸಾಹಿತ್ಯಗ್ರಂಥಗಳನ್ನೂ, ಪಂ. ಜಗನ್ನಾಥ ಶಾಸ್ತ್ರಿಯವರು ವ್ಯಾಕರಣ ಮತ್ತು ಸಾಹಿತ್ಯಗ್ರಂಥಗಳನ್ನೂ ಓದಿಸುತ್ತಿದ್ದರು.

ಇಂತು ಹಲವು ಪ್ರೌಢ ವಿದ್ವಾಂಸರ ಮತ್ತು ವಿದ್ಯಾರ್ಥಿಗಳ ಸಹವಾಸವು ಅತ್ಯಾನಂದಕರವಾಗಿದ್ದಿತು. ಅಂತಹ ಸುಸಂದರ್ಭವು ಯಾರಿಗೂ ಈ ಸಂಸಾರದಲ್ಲಿ ದೊರೆಯದು ! ವಿದ್ಯಾರ್ಥಿಜೀವನವೇ ಸುಖಮಯವೆನ್ನಬೇಕು.

ಈ ರೀತಿಯಾಗಿ ಪರಮ ಸಂತೋಷದಿಂದ ವಿದ್ಯಾಧ್ಯಯನವನ್ನು ಮಾಡು ತ್ತಿರುವಾಗ ಒಂದು ದಿನ ರಾತ್ರೆ ಇವರಿಗೆ “ ಮೂಡಬಿದ್ರೆಯಲ್ಲಿರುವ ಪ್ರಾಚೀನ ತಾಲೆಗರಿ ಗ್ರಂಥಗಳೆಲ್ಲವೂ ಸುಟ್ಟು ಹೋದಂತೆಯೂ, ಅವನ್ನು ಯಾರಿಂದಲೂ ಆರಿಸಿ ರಕ್ಷಿಸುವುದಕ್ಕೆ ಸಾಧ್ಯವಾಗದಂತೆಯೂ, ಕೊನೆಗೆ ಇವರೇ ಬಲು ಪ್ರಯ ತ್ನದಿಂದ ಬೆಂಕಿಯನ್ನು ಆರಿಸಿ, ಕೆಲವು ಗ್ರಂಥವನ್ನಾದರೂ ರಕ್ಷಿಸಿದಂತೆಯೂ ತಾ. ೧೩—೧೧—೧೯೧೫ ರಲ್ಲಿ ಸ್ವಪ್ನವಾಗಿದ್ದಿತು. ಅದು ಈಗಲೂ ಇವರ ಅಂದಿನ ಡೈರಿಯಲ್ಲಿ ಬರೆಯಲ್ಪಟ್ಟಿದೆ. ಅಂದಿನಿಂದ ಇವರಿಗೆ ಗ್ರಂಥಸಂರಕ್ಷಣೆ, ಪುಸ್ತಕ ಸಂಗ್ರಹ ಮಾಡುವ ಬಯಕೆಯು ವಿಶೇಷವಾಗಿದ್ದಿತು.

ಇತ್ತ ವೇಣೂರಲ್ಲಿ ಪೂಜ್ಯಪಿತಾಮಹರಾದ ಗುಮ್ಮಂಣ ಇಂದ್ರರಿಗೆ ಅತಿ ವೃದ್ಧಾಪ್ಯದ ದೆಸೆಯಿಂದ ಇಲ್ಲಿಯ ಕುಲವೃತ್ತಿಯನ್ನು ನಡಿಸುವುದಕ್ಕೆ ಅಸಾಧ್ಯ ವೆಂದೂ ನಾವು ಬಹಳ ಕಷ್ಟದಲ್ಲಿದ್ದೇವೆಂದೂ ತಾಯಮ್ಮನವರು ನೊಂದು ಊರಿಗೆ ಬರಬೇಕೆಂದು ಇವರಿಗೆ ಪತ್ರ ಬರೆಯುಸುತ್ತಿದ್ದರು ಇವರಿಗೆ. ಆದರೂ ತಾನು ಅಂತಹ ಮಹಾವಿದ್ಯಾಲಯಕ್ಕೆ ಹೋಗಿ ತಕ್ಕಮಟ್ಟಿಗಾದರೂ ವಿದ್ಯಾ ವಂತನಾಗಬೇಕೆಂದು ಬಗೆದು ೧೯೧೫ ಮತ್ತು ೧೯೧೬ ನೆಯ ವರ್ಷಗಳಲ್ಲಿ ಶಾಸ್ತ್ರೀಯ ಪರೀಕ್ಷೆಯನ್ನು ಕೊಟ್ಟು ಉತ್ತೀರ್ಣರಾದರು. ಕೊನೆಗೆ ತಾಯಮ್ಮ ನವರ ಆಗ್ರಹದಿಂದ ಉಪಾಯವಿಲ್ಲದೆ ರಜೆಯಲ್ಲಿ ಊರಿಗೆ ಬರಲೇ ಬೇಕಾ ಯಿತು. ವಿಧಿನಿಯಮವು ಬಲವತ್ತರವಾಗಿರುವಾಗ ಯಾರೇನು ಮಾಡಬಲ್ಲರು ? ಆಗ ಇವರ ವಿದ್ಯಾಭ್ಯಾಸದ ಅವನತಿಯಕಾಲ ! ಅಂತೂ ಮೊರೇನಾ ವಿದ್ಯಾಲಯ ವನ್ನು ಬಿಡಲೇ ಬೇಕಾಯಿತು ! ಊರಿಗೆ ಬಂದರು.

ಇವರಿಂದ ಅನೇಕ ವಿದ್ಯಾರ್ಥಿಗಳಿಗೆ ಉನ್ನತಿಯನ್ನು ಹೊಂದುವ ಯೋಗ ವಿದ್ದಿತು. ಆ ಕಾರಣದಿಂದಲೇ ಮೂಡಬಿದ್ರೆಗೆ ಬಂದೊಡನೆಯೇ ಇಲ್ಲಿಯ ಆತ ಮನೆ ಕುಂಞಮ್ಮ ಶೆಟ್ರ್ರು, ಚಿ ನಾಗರಾಜ ಶೆಟ್ರ್ರು, ದಾನಶಾಲಾ ಮಠದ ಸ್ವರ್ಗೀಯ ಶ್ರೀಗಳವರು ಮೊದಲಾದವರಿಗೆ ಇವರಲ್ಲಿ ಹೆಚ್ಚಿನ ವಿಶ್ವಾಸವೂ ಪ್ರೇಮವೂ ಉಂಟಾಯಿತು.

ಆಗ ಇಲ್ಲಿಯ ಸಂಸ್ಕೃತ ಪಾಠಶಾಲೆಯಲ್ಲಿ ಯಾರೂ ಅಧ್ಯಾಪಕರಿಲ್ಲದೆ ಅವನತಿಯನ್ನು ಹೊಂದಿದ್ದಿತು. ಇವರು ' ನನಗೆ ಪುನಃ ವಿದ್ಯಾಭ್ಯಾಸಕ್ಕೆ ಹೋಗಬೇಕೆಂದು ಆಗ್ರಹ ಮಾಡಿದರೂ, ಈ ಊರಿನವರು ಕೇಳದೆ, " ನೀವು ಓದಿದ್ದು ನಮ್ಮೂರಿಗೆ ಸಾಕು. ನೀವು ಇಲ್ಲಿ ನಾಲ್ಕು ಮಂದಿ ವಿದ್ಯಾರ್ಥಿಗಳನ್ನು ವಿದ್ವಾಂಸರನ್ನಾಗಿ ಮಾಡಬೇಕು. ಇನ್ನು ಪರಸ್ಥಳಕ್ಕೆ ಹೋಗುವುದು ಬೇಡ " ಎಂಬ ಅವರ ಆಗ್ರಹದಿಂದಲೂ ಇವರ ಪೂಜ್ಯ ಗುರುವರ್ಯರಾದ ನೇಮಿಸಾಗರ ವರ್ಣಿಯವರ ಆಜ್ಞೆಯಿಂದಲೂ ೧೯೧೭ ರಲ್ಲಿ ಸ್ಥಾನೀಯ ಸಂಸ್ಕೃತಪಾಠಶಾಲೆಯಲ್ಲಿ ಅಧ್ಯಾಪಕರಾಗಿ ನಿಯೋಜಿಸಲ್ಪಟ್ಟರು.

**ಅಧ್ಯಾಪಕ ಜೀವನಃ**—ಆ ಮೇಲೆ ಜ್ಯೇಷ್ಠ ಶುದ್ಧ ಶ್ರುತಪಂಚಮಿಯಂದು ಸುಮಾರು ೨೫ ಮಂದಿ ವಿದ್ಯಾರ್ಥಿಗಳಿಗೆ ನೇಮಿಚಂದ್ರಾಚಾರ್ಯಕೃತ ಪ್ರತಿಷ್ಠಾವಿಧಿಯನ್ನೂ ಅವರ ಜತೆಯಲ್ಲಿಯೇ ವೈದಿಕ ಮತ್ತು ಶ್ರಾವಕರ ವಿದ್ಯಾರ್ಥಿಗಳಿಗೆ ಪ್ರವೇಶಿಕಾ ಮತ್ತು ವಿಶಾರದ ಪರೀಕ್ಷೆಯ ಗ್ರಂಥಗಳನ್ನು ಪ್ರಾರಂಭಿಸಿದರು. ಹೀಗೆ ಒಂದೆರಡು ವರ್ಷಗಳಲ್ಲಿ ಅನೇಕ ವಿದ್ಯಾರ್ಥಿಗಳು ಪರೀಕ್ಷೆಯಲ್ಲಿ ಉತ್ತೀರ್ಣರಾದರು. ಇಂತು ಸುಮಾರು ೧೪ ವರ್ಷಗಳ ವರಗೆ ಹಲವು ವಿದ್ಯಾರ್ಥಿಗಳಿಗೆ ಸಂಸ್ಕೃತ, ಪೂಜಾಪಾಠ, ಪ್ರತಿಷ್ಠಾವಿಧಿ ಮೊದಲಾದ ಗ್ರಂಥಗಳನ್ನು ಪಾಠ ಹೇಳಿ, ವಿದ್ವಾಂಸರನ್ನಾಗಿ ಮಾಡಿದರು.

ಕ್ರಿ. ಶ. ೧೯೧೯ ರಲ್ಲಿ ಆರಾ ಬಾಬು ನಿರ್ಮಲಕುಮಾರಜಿಯವರ ತಮ್ಮನಾದ ಬಾಬು ಚಕ್ರೇಶ್ವರ ಕುಮಾರಜಿಯವರಿಗೆ ಉಪನಯನ ಸಂಸ್ಕಾರವನ್ನು ಮಾಡಿಸುವುದಕ್ಕೋಸ್ಕರ ಇವರನ್ನು ಅಲ್ಲಿಗೆ ಬರಮಾಡಿಕೊಂಡರು. ಆಗ ಅಲ್ಲಿ ಉಪನಯನ ಸಂಸ್ಕಾರವನ್ನು ಬಲು ವೈಭವದಿಂದ ನೆರವೇರಿಸಿದರು. ಆಗಲೇ ಅಲ್ಲಿಯ ಜೈನ ಬಾಲಾವಿಶ್ರಾಮದಲ್ಲಿ ವಾಸ್ತುಶಾಂತಿಯನ್ನು ಮಾಡಿದರು. ಅದರ ಪ್ರಾರಂಭೋತ್ಸವು ಇವರ ಹಸ್ತದಿಂದಲೇ ನೆರವೇರಿಸಲ್ಪಟ್ಟು ಇವರೇ ಪ್ರಥಮತಃ ಬಾಲಿಕೆಯರಿಗೆ ಪಾಠ ಪ್ರವಚನವನ್ನು ಪ್ರಾರಂಭಿಸಿದ್ದಾಗಿದೆ. ಆ ಮೇಲೆ ಕಾಶೀ ಮತ್ತು ಸಮ್ಮೇದಶಿಖರಿ ಮೊದಲಾದ ಪುಣ್ಯ ಕ್ಷೇತ್ರಗಳ ದರ್ಶನವನ್ನು ಮಾಡಿಕೊಂಡು ಊರಿಗೆ ಬಂದರು.

ಅದೇ ವರ್ಷ ೧೯—೧೨—೧೯೧೯ ರಲ್ಲಿ ಮೂಡಬಿದ್ರೆಯ ಚಿ. ಜಿನರಾಜ ಶೆಟ್ರ್ರು ರಾಜು ಭಂಡಾರಿಗಳು ಮೊದಲಾದ ಸಂಘದವರಿಗೆ ಸಮ್ಮೇದಶಿಖರಿ, ಪಾವಾಪುರಿ, ಚಂಪಾಪುರಿ, ರಾಜಗಿರಿ ಮೊದಲಾದ ಪುಣ್ಯಕ್ಷೇತ್ರಗಳ ದರ್ಶನ

ವನ್ನು ಮಾಡಿಸಿಕೊಂಡು ತಾ. ೭-೧-೧೯೩೦ ಕ್ಕೆ ವಾಪಾಸು ಸುರಕ್ಷಿತವಾಗಿ ಬಂದು ತಲ್ಪಿದರು.

ಆ ಸಂದರ್ಭದಲ್ಲಿ ಇವರು ಎಲ್ಲರ ಪ್ರೀತಿಗೆ ಪಾತ್ರರಾಗಿದ್ದರು. ಆಗ ಇವರಿಗೆ ಶಾಲೆಯಲ್ಲಿ ಸಿಕ್ಕುವ ವೇತನವು ಅತ್ಯಲ್ಪವಾದರೂ ಇತರ ಪರಿಶ್ರಮಗಳಿಂದ ಹೆಚ್ಚಿನ ಧನಸಂಪಾದನೆಯಾಗುತ್ತಿತ್ತು. ಇವರು ಮುಂಬಯಿ, ಆರಾ, ಕಲ್ಕತ್ತಾ ಇಂದೂರು, ಸಹರನಪೂರ ಮೊದಲಾದ ಗ್ರಂಥಭಾಂಡಾರಗಳಿಗೆ ಅನೇಕ ಶಾಸ್ತ್ರ ಗ್ರಂಥಗಳನ್ನು ಮೂರು ನಾಲ್ಕು ಮಂದಿ ಲೇಖಕರನ್ನಿಟ್ಟುಕೊಂಡು ಪ್ರತಿಲಿಪಿ ಮಾಡಿಸಿ ಕೊಡುತ್ತಿದ್ದರು. ಇದರಿಂದಲೂ ವೇತನ ದೊರೆಯುತ್ತಿತ್ತು. ಆಗ ಮಹಾಧವಲಸಿದ್ಧಾಂತದ ಪ್ರತಿಲಿಪಿಯನ್ನು ಇವರೇ ಸ್ವಯಂ ಮಾಡುತ್ತಿದ್ದರು. ಅವು ಅಲ್ಲದೆ ಕೆಲವು ವಿದ್ಯಾರ್ಥಿಗಳಿಗೆ ಸಂಗೀತ ಶಿಕ್ಷಣವನ್ನೂ ಕೊಡುತ್ತಿದ್ದರು. ಅಂತು ಆಗ ಇವರ ಗಳಿಂದಲೂ ಯೋಗ್ಯ ದ್ರವ್ಯಸಂಪಾದನೆಯಾಗುತ್ತಿತ್ತು. ಅಂತು ಆಗ ಇವರ ಸಂಪತ್ತಿನ ಉನ್ನತಿಯ ಕಾಲವೆಂದರೆ ಅತಿಶಯೋಕ್ತಿಯಾಗದು. ಇಂತು ಒಂದೆಡೆ ಪಾಠಶಾಲೆಯ ಅಧ್ಯಾಪನಕಾರ್ಯ; ಇನ್ನೊಂದೆಡೆ ಸ್ವಯಂ ಗ್ರಂಥ ಲೇಖನ ಮತ್ತು ಇತರರಿಂದ ಗ್ರಂಥಗಳನ್ನು ಬರೆಯಿಸುವಿಕೆ; ಮತ್ತೊಂದೆಡೆ ಸಂಗೀತ ಶಿಕ್ಷಣ ಮತ್ತು ಪಂಚಕಲ್ಯಾಣಗಳನ್ನು ಮಾಡುವಿಕೆ, ಇದು ಮೊದಲಾದುಗಳಿಂದ ಹೆಚ್ಚಿನ ದ್ರವ್ಯಸಂಪಾದನೆಯನ್ನು ಮಾಡಿದರು.

**ಗೃಹಸ್ಥಜೀವನ:**—ಹೀಗಿರುವಲ್ಲಿ " ಸರ್ವೇ ಗುಣಾಃ ಕಾಂಚನ ಮಾಶ್ರಯಂತೆ " ಇವರ ತಾಯಿ ಮೊದಲಾದ ಬಂಧುಗಳು ಇವರಿಗೆ ಲಗ್ನವಾಗಬೇಕೆಂದು ಆಗ್ರಹ ಮಾಡಿದರು. ಕೊನೆಗೆ ತಾಯಮ್ಮನವರ ಮನಸ್ಸನ್ನು ನೋಯಿಸಲಾರದೆ ಸಮ್ಮತಿಸಬೇಕಾಯಿತು. ಆಗ ನೇರೆಂಕಿಬಸ್ತಿ ಪದ್ಮಯ್ಯ ಇಂದ್ರರ ಸುಪುತ್ರಿ ಚಿ. ಸೌ. ಶಿವದೇವಿ ಎಂಬ ಕನ್ನಿಕೆಯನ್ನು ತಂದು, ರೌದ್ರಿ. ಸಂ. ದ ಮಾರ್ಗಶಿರ ತಾ. ೨೦-೧೨-೧೯೨೦ ರಲ್ಲಿ ವೇಣೂರು ಹಿರಿಯರ ಮನೆಯಲ್ಲಿ ಬಲು ವೈಭವದಿಂದ ವಿವಾಹಸಮಾರಂಭವನ್ನು ಜರಗಿಸಿದರು. ಇವರ ಧರ್ಮಪತ್ನಿಯೂ ಇವರ ಮನಸ್ಸಿಗೆ ಅನುಗುಣವಾಗಿ ಪತಿಭಕ್ತೆಯೂ ಸದ್ಗುಣ ಸಂಪನ್ನೆಯೂ ಶೀಲವತಿಯೂ ಆಗಿದ್ದಾರೆ. ಇವರ ಲಗ್ನದಲ್ಲಿ ಸಾವಿರಾರು ರೂಪಾಯಿಗಳ ವೆಚ್ಚವನ್ನು ತನ್ನ ಸ್ವಂತ ಉತ್ಪತ್ತಿಯಿಂದಲೇ ಮಾಡಿದುದಾಗಿದೆ.

ಬಳಿಕ ಅದೇ ವರ್ಷದ ಮಾಘಮಾಸದಲ್ಲಿ ತನ್ನ ತಮ್ಮನಾದ ನೇಮಿರಾಜ ಯಿಂದ್ರರಿಗೆ ವಿವಾಹಮಂಗಲವನ್ನು ಮಾಡಿದರು. ಬಳಿಕ ಅದೇ ತಿಂಗಳಲ್ಲಿ ಕಾರ್ಕಳ ಗೋಮಟೇಶ್ವರ ಸ್ವಾಮಿಯ ಮಸ್ತಕಾಭಿಷೇಕಕ್ಕೆ ಸಕುಟುಂಬ ಪ್ರಯಾಣವನ್ನು ಮಾಡಿದರು.

೧೯೩೩ ನೆಯ ಫೆಬ್ರವರಿಯಲ್ಲಿ ಆದ ಮೂಡಬಿದ್ರೆ ಗುರುಗಳ ಬಸ್ತಿ ಪಂಚಕಲ್ಯಾಣದಲ್ಲಿ ತನ್ನ ಅಜ್ಜಯ್ಯನವರಾದ ಕೆರೆಬಸ್ತಿ ಪಾಚಪ್ಪ ಇಂದ್ರರಿಗೆ ಸಹಾಯಕರಾಗಿ ವಿಧಿ-ವಿಧಾನಗಳನ್ನು ಮಾಡಿಸಿದರು.

೬—೧೨—೧೯೫೩ ರಲ್ಲಿ ಧರ್ಮಾತ್ಮರಾದ ಪೆರಿಂಜೆಗುತ್ತು ಜಿನ್ನಪ್ಪ ಕಂಬಳಿಯವರು ಕೂಸಮ್ಮನವರು ಮೊದಲಾದವರ ಆಗ್ರಹದಿಂದ ಜೈನಸಂಘದವರನ್ನು ಸಮ್ಮೇದಶಿಖರಿ ಮೊದಲಾದ ತೀರ್ಥಕ್ಷೇತ್ರಗಳ ಯಾತ್ರೆಯನ್ನು ಮಾಡಿಸಿ ತಾನೂ ಅಂತಹ ಪುಣ್ಯಕ್ಷೇತ್ರಗಳ ದರ್ಶನದಿಂದ ಪವಿತ್ರರಾದರು.

೮—೩—೧೯೫೪ ರಲ್ಲಿ ಸ್ಥಾನೀಯ ಕೋಟಿಬಸ್ತಿಯ ಪಂಚಕಲ್ಯಾಣದಲ್ಲಿ ಸಹಭಾಗಿಗಳಾಗಿ ಬಲು ಪರಿಶ್ರಮದಿಂದ ವಿಧಾನಗಳನ್ನು ಮಾಡಿದರು.

೬—೧೧—೧೯೫೪ ರಲ್ಲಿ ತನ್ನ ತಮ್ಮಂದಿರಾದ ವರ್ಧಮಾನ ಮತ್ತು ಧರಣೇಂದ್ರ ಇವರನ್ನು ಶಾಸ್ತ್ರೀಯ ಉಚ್ಚ ಶಿಕ್ಷಣಕ್ಕಾಗಿ ಮೊರೇನಾವಿದ್ಯಾಲಯಕ್ಕೆ ಕರೆಕೊಂಡು ಹೋಗಿ, ಅಲ್ಲಿ ಅವರಿಗೆ ಯೋಗ್ಯವಾದ ವಿದ್ಯಾಭ್ಯಾಸಕ್ಕೆ ಅನುಕೂಲಗೊಳಿಸಿದರು. ಮತ್ತು ಅಲ್ಲಿಂದಲೇ ಸಹರನ್‌ಪುರಕ್ಕೆ ಹೋಗಿ, ಅಲ್ಲಿ ಕೆಲವು ಸಮಯಗಳಿದ್ದು ಧವಲ ಮತ್ತು ಜಯಧವಲ ಸಿದ್ಧಾಂತ ಗ್ರಂಥಗಳ ಮುಖಾಬಿಲೆ—ಸಂಶೋಧನೆಯನ್ನು ಮಾಡಿಕೊಟ್ಟರು.

ಕ್ರಿ. ಶ. ೧೯೫೬ ರಲ್ಲಿ ಮುಂಬಯಿ ಐಲಕ ಪನ್ನಾಲಾಲ್ ಸರಸ್ವತಿ ಭವನಕ್ಕೆ ಮೂಡಬಿದ್ರೆ ಮೊದಲಾದ ಕಡೆಗಲ್ಲಿ ಸಂಚರಿಸಿ, ಪ್ರತಿ ಮನೆಯಲ್ಲಿದ್ದ ತಾಲೆಗರಿಗ್ರಂಥಗಳ ಸೂಚೀಪತ್ರವನ್ನು ತಯಾರಿಸಿ ಕಳುಹಿಸಿದರು.

ಇದೇ ಸಂ. ರದ ಮಾರ್ಗಶಿರ ಮಾಸದಲ್ಲಿ ( ತಾ. ೧೭—೧೧—೧೯೫೬) ನೆರೆಂಕಿಬಸ್ತಿಯ ಪಂಚಕಲ್ಯಾಣ ಮಹೋತ್ಸವದಲ್ಲಿ ಇವರೇ ಪ್ರತಿಷ್ಠಾಚಾರ್ಯರಾಗಿ ಬಲುವೈಭವದಿಂದ ವಿಧಾನಗಳನ್ನು ಜರಗಿಸಿದರು.

ತಾ. ೨೬—೧—೧೯೫೭ ರಲ್ಲಿ ಆರಾ ಬಾಬು ನಿರ್ಮಲಕುಮಾರಜಿಯವರು ಮಾಡಿಸಿದ ಪಂಚಕಲ್ಯಾಣದಲ್ಲಿ ಇವರೇ ಪ್ರತಿಷ್ಠಾಚಾರ್ಯರಾಗಿದ್ದರು. ಅದು ಬಲು ವಿಜೃಂಭಣೆಯಿಂದ ಜರಗಿದ್ದಿತು. ಆಗ ಇವರಿಗೆ ಸಹಸ್ರಾರು ರುಪ್ಯಾಗಳ ಪುರಸ್ಕಾರವು ದೊರಕ್ಕಿದ್ದಿತು. ಆ ಸಂದರ್ಭ ತನ್ನ ಜತೆಯಲ್ಲಿದ್ದ ಸಹಯೋಗಿಗಳಿಗೆ ಸಮ್ಮೇದಶಿಖರಿ ಮೊದಲಾದ ತೀರ್ಥಸ್ಥಾನಗಳ ದರ್ಶನವನ್ನು ಮಾಡಿಸಿ, ತಾನೂ ದರ್ಶನದಿಂದ ಪವಿತ್ರರಾದರು.

ಈ ರೀತಿಯಾಗಿ ಅತ್ಯಂತ ಪರಿಶ್ರಮದಿಂದ ಸಮಾಜಸೇವೆಯನ್ನು ಮಾಡುತ್ತಿರುವ ಮಹನೀಯರಿಗೆ ಪೂರ್ವಾರ್ಜಿತಕರ್ಮದ ಉದಯವೋ ಎಂಬಂತೆ, ತಾ. ೭—೧—೧೯೫೭ ರಲ್ಲಿ ಶ್ವಾಸಖಾಸ ರೋಗವು ಪ್ರಾರಂಭವಾಯಿತು. ಅದೊಂದು ಒಳ್ಳೇ ಮರಕ್ಕೆ ಹಿಡಿದ ಬಂದಣಿಕೆಯಂತೆ ಸಹಸ್ರಾರು ರೂಪ್ಯಾಗಳ ವೆಚ್ಚದಿಂದ ಔಷಧಿಯನ್ನು ಮಾಡಿಸಿದರೂ ಫಲಕಾರಿಯಾಗಲಿಲ್ಲ ! ಜೀವಾಂತ್ಯದವರೆಗೂ ಅವರು ಏಳ್ಗೆಯನ್ನು ಹೊಂದಲಿಲ್ಲ.

ಹೀಗಿರುವಲ್ಲಿ ತಾ. ೧೨—೧—೧೯೫೮ ರಲ್ಲಿ ವೇಣೂರು ಗೋಮಟೇಶ್ವರಸ್ವಾಮಿಯವರಿಗೆ ಮಹಾಮಸ್ತಕಾಭಿಷೇಕ ಪಂಚಕಲ್ಯಾಣ ಮಹೋತ್ಸವವನ್ನು ಇವರೇ ಪ್ರತಿಷ್ಠಾಚಾರ್ಯರಾಗಿ ಬಲು ವೈಭವದಿಂದ ನೆರವೇರಿಸಿದರು.

ತಾ. ೭—೫—೧೯೩೨ ರಲ್ಲಿ ಆರಾದಲ್ಲಿ ಪಂಚಾಯತಿ ಮಂದಿರದಲ್ಲಿ ಮಾಡಿಸಿದ ನಂದೀಶ್ವರದೀಪರಚನೆಯ ಪಂಚಕಲ್ಯಾಣವನ್ನು ಮಾಡಿದರು. ಆಗ ತನ್ನ ಸಹಯೋಗಿಗಳೂ ತಾನೂ ಸಮ್ಮೇದಶಿಖರಿಯ ದರ್ಶನವನ್ನು ಮಾಡಿದರು.

ಕ್ರಿ. ಶ. ೧೯೩೧ ನೇ ಮಾರ್ಚಿಯಲ್ಲಿ ತನ್ನ ತಮ್ಮ ವರ್ಧಮಾನ ಶಾಸ್ತ್ರಿಗಳಿಗೆ ಬಲು ವೈಭವದಿಂದ ವಿವಾಹಸಮಾರಂಭವನ್ನು ಜರಗಿಸಿದರು.

ಕ್ರಿ. ಶ. ೧೯೩೫ ನೇ ಮಾರ್ಚಿಯಲ್ಲಿ ಸೋಲಾಪುರ ರಾವಜೀ ಸಖಾರಾಮ ದೋಶಿಯವರು ಸುಮಾರು ನಾಲ್ವತ್ತು ಸಾವಿರ ವೆಚ್ಚ ತಗಲಿಸಿ ಮಾಡಿದ ಪಂಚಕಲ್ಯಾಣದಲ್ಲಿ ಇವರೇ ಪ್ರತಿಷ್ಠಾಚಾರ್ಯರಾಗಿದ್ದರು.

ಕ್ರಿ. ಶ. ೧೯೩೭ ರಲ್ಲಿ ಕನ್ನಡ ವಿದ್ವಾನ್ ಪರೀಕ್ಷೆಯನ್ನು ಕೊಟ್ಟು ಪ್ರಿಲಿಮಿನರಿಯಲ್ಲಿ ತೇರ್ಗಡೆ ಹೊಂದಿದರು.

ಕ್ರಿ. ಶ. ೨೮—೫—೧೯೩೯ ರಲ್ಲಿ ಕುಟುಂಬ ಸಮೇತವಾಗಿ ಶ್ರವಣಬೆಳ್ಗೊಳ ಕ್ಷೇತ್ರದ ತೀರ್ಥಯಾತ್ರೆಯನ್ನು ಮಾಡಿದರು.

ಕ್ರಿ. ಶ. ೧೯೪೦ ಫೇಬ್ರವರಿಯಲ್ಲಿ ಜರಗಿದ ಶ್ರ. ಬೆಳ್ಗೊಳದ ಗೋಮ್ಮಟೇಶ್ವರ ಸ್ವಾಮಿ ಮಹಾಮಸ್ತಕಾಭಿಷೇಕಕ್ಕೆ ತಾಯಮ್ಮ ವಗೈರೆಯರನ್ನು ಕರಕೊಂಡು ಹೋದರು.

ಕ್ರಿ. ಶ. ೧೯೪೦ ನೇ ಮಾರ್ಚಿಯಲ್ಲಿ ಜರಗಿದ ಬಂಗ್ರ ಮಂಜೇಶ್ವರ ಚತುರ್ಮುಖ ಬಸ್ತಿಯ ಪಂಚಕಲ್ಯಾಣ ಮಹೋತ್ಸವವನ್ನು ಇವರೇ ನೆರವೇರಿಸಿದರು.

ಕ್ರಿ. ಶ. ೧೯೪೬ ನೇ ಮಾರ್ಚ ಮಾಸದಲ್ಲಾದ ಕಾರ್ಕಳ ಬೊಮ್ಮರಾಜ ಬಸ್ತಿಯ ಪಂಚಕಲ್ಯಾಣದಲ್ಲಿ ಇವರೇ ಪ್ರತಿಷ್ಠಾಚಾರ್ಯರಾಗಿದ್ದರು.

ಈ ರೀತಿಯಾಗಿ ತನ್ನ ಅಧ್ಯಾಪನಕಾಲದಲ್ಲಿ ಅನೇಕ ವಿದ್ಯಾರ್ಥಿಗಳಿಗೆ ಸಂಸ್ಕೃತಸಾಹಿತ್ಯ, ಆಗಮ ನ್ಯಾಯ ಮತ್ತು ವ್ಯಾಕರಣ, ಪೂಜಾಪಾಠ, ಪ್ರತಿಷ್ಠಾವಿಧಿ ಮೊದಲಾದ ಗ್ರಂಥಗಳನ್ನು ಪಾಠ ಹೇಳಿ ವಿದ್ಯಾವಂತರನ್ನಾಗಿ ಮಾಡಿದರು. ಅಲ್ಲದೆ ಅನೇಕ ಪಂಚಕಲ್ಯಾಣ, ತೀರ್ಥಯಾತ್ರೆ ಮೊದಲಾದ ಪುಣ್ಯಕಾರ್ಯಗಳನ್ನು ಮಾಡಿ ತನ್ನ ಜನ್ಮವನ್ನು ಸಾರ್ಥಕವನ್ನಾಗಿ ಮಾಡಿಕೊಂಡರು ಇವರು ವಿದ್ಯಾವಂತರಾಗಿ ಮೂಡಬಿದ್ರೆಗೆ ಬರುವ ಮೊದಲು ಇಲ್ಲಿಂದ ಯಾರೂ ವಿದ್ಯಾಭ್ಯಾಸಕ್ಕೋಸ್ಕರ ಉತ್ತರದೇಶಕ್ಕೆ ಹೋದುದಿಲ್ಲವೆಂದರೆ ವಿರೋಧವಾಗದು. ಕ್ರಿ. ಶ. ೧೯೧೭ ರಿಂದ ೧೯೩೨ ನೆಯ ವರೆಗೆ ಸುಮಾರು ಹದಿನಾರು ವರ್ಷಗಳಲ್ಲಿ ಅಧ್ಯಾಪನಕಾರ್ಯವನ್ನು ಮಾಡುತ್ತಾ ಅನೇಕ ಬಾಲಕಬಾಲಕಿಯರನ್ನು ಉಚ್ಚ ಶಿಕ್ಷಣಕ್ಕಾಗಿ ಅವರಿಗೆ ವಿದ್ಯಾರ್ಥಿವೇತನದ ಸರಿಯಾದ ವ್ಯವಸ್ಥೆಗೊಳಿಸಿ ಕಳುಹಿಸಿದರು.

ಈಗ ಅದರ ಫಲಸ್ವರೂಪವಾಗಿ ಪಂ. ನಾಗರಾಜ ಶಾಸ್ತ್ರಿಗಳು ನ್ಯಾಯತೀರ್ಥ, ಪಂ. ವರ್ಧಮಾನ ಶಾಸ್ತ್ರಿಗಳು ನ್ಯಾಯ ಮತ್ತು ಕಾವ್ಯತೀರ್ಥ,

ಧರಣೇಂದ್ರ ಶಾಸ್ತ್ರಿ ನ್ಯಾಯತೀರ್ಥ, ಆಸ್ಥಾನವಿದ್ವಾನ್ ಪಂ. ಜಿನರಾಜ ಶಾಸ್ತ್ರಿ ನ್ಯಾಯ—ಕಾವ್ಯತೀರ್ಥ, ಆಸ್ಥಾನವಿದ್ವಾನ್ ಪಂ. ಶಿಶುಪಾಲ ಶಾಸ್ತ್ರಿ ಸಾಹಿತ್ಯ ಶಿರೋಮಣಿ, ಆಯುರ್ವೇದಾಚಾರ್ಯ ಅನಂತರಾಜ ಶಾಸ್ತ್ರಿ, ಪಂ. ಚಂದ್ರರಾಜ ಜೈನೀ ಸಾಹಿತ್ಯ ಶಾಸ್ತ್ರಿ, ಪಂ. ವರ್ಧಮಾನ ಹೆಗಡೆ ವಿಶಾರದ ಧರ್ಮಪ್ರಚಾರಕರು, ಬ್ರ. ಅರ್ಹದ್ದಾಸ ಸ್ವಾಮಿಯವರು ನ್ಯಾಯತೀರ್ಥ, ( ವರ್ತಮಾನ ಹುಂಚಮಠಾಧೀಶರು ) ಶ್ರೀಪಾಲ ಜೈನೀ ಮೊದಲಾದವರು ಪ್ರಸಿದ್ಧಪಟ್ಟವರಾಗಿ ಸಮಾಜಸೇವೆಯನ್ನು ಮಾಡುತ್ತಾ, ತಂತಮ್ಮ ಜೀವನನಿರ್ವಾಹವನ್ನು ಮಾಡಿಕೊಂಡಿದ್ದಾರೆ. ಅಲ್ಲದೆ ಕೆಲವರು ವೈದಿಕವೃತ್ತಿಗೆ ಅನುಕೂಲವಾದ ಸಂಹಿತಾದಿ ಗ್ರಂಥಗಳಲ್ಲಿ ಉತ್ತೀರ್ಣರಾಗಿ ಸಮಾಜಸೇವೆಯನ್ನು ಮಾಡುತ್ತಿದ್ದಾರೆ. ಇಂತು ತನ್ನ ಅಧ್ಯಾಪನಕಾಲದಲ್ಲಿ ಹಲವು ಮಂದಿ ಬಾಲಕ ಬಾಲಕಿಯರನ್ನು ವಿಧ್ಯಾವಂತರನ್ನಾಗಿ ಮಾಡಿದ ಶ್ರೇಯಸ್ಸು ಇವರಿಗೆ ಸಲ್ಲತಕ್ಕದ್ದು.

ಈ ರೀತಿಯಾಗಿ ತನ್ನ ಅವಿಶ್ರಾಂತಪ್ರಯತ್ನದಿಂದ ಹಲವು ಧರ್ಮಕಾರ್ಯಗಳನ್ನು ಎಸಗುತ್ತಿರುವ ಇವರಿಗೆ ' ಶ್ರೆಯಾಂಸಿ ಬಹುವಿಘ್ನಾನಿ ' ಎನ್ನುವಂತೆ ಉಬ್ಬಸದ ಕಾಯಿಲೆಯು ದಿನೇ ದಿನೇ ಅಭಿವೃದ್ಧಿಯಾಗುತ್ತಾ ಇವರ ಶರೀರವು ಹೆಚ್ಚಿನ ಕ್ಷೀಣತೆಯನ್ನು ಹೊಂದುತ್ತ ಬಂದಿತು ! ಇದೇನೆಂದು ಡಾಕ್ಟರರಿಂದ ಪರೀಕ್ಷಿಸಲು ಅದಕ್ಕೆ ಅವರು " ನಿಮಗೆ ಈ ಕಾಯಿಲೆಯು ಹೆಚ್ಚಿನ ಪರಿಶ್ರಮವಾದ ಅಧ್ಯಾಪನಾದಿ ಕಾರ್ಯಗಳಿಂದ ಉಂಟಾಗಿದೆ. ನೀವು ಅಧ್ಯಾಪನ ಕಾರ್ಯವನ್ನು ಬಿಟ್ಟು ವಿಶ್ರಾಂತಿಯಿಂದಿರಬೇಕು. " ಎಂದು ಸಲಹೆಯನ್ನಿತ್ತರು. ಕೊನೆಗೆ ಉಪಾಯವಿಲ್ಲದೆ, ಕ್ರಿ. ಶ. ೧೯೩೨ ರಲ್ಲಿ ಆ ಕಾರ್ಯವನ್ನು ಬಿಡಲೇ ಬೇಕಾಗಿ ಬಂತು.

**ಸಮಾಜಸೇವೆ**—ಶಾಸ್ತ್ರಿಗಳಿಗೆ ತನ್ನ ವಿದ್ಯಾರ್ಥಿಜೀವನ ಮೊದಲ್ಗೊಂಡು ವಿದ್ಯೋನ್ನತಿ, ಧರ್ಮೋನ್ನತಿ, ಸಮಾಜೋನ್ನತಿ ಮೊದಲಾದ ಪರೋಪಕಾರಕ ಕಾರ್ಯಗಳನ್ನು ಮಾಡಬೇಕೆಂದು ಹೆಚ್ಚಿನ ಪ್ರೀತಿ. 'ಪರೋಪಕಾರಾಯ ಸತಾಂ ವಿಭೂತಯಃ' ಸತ್ಪುರುಷರು ತಮ್ಮ ತನುಮನೋಧನಗಳನ್ನು ಪರೋಪಕಾರಕ್ಕಾಗಿ ವಿನಿಯೋಗಿಸುತ್ತಾರೆ. ಅವರು ತನ್ನ ಗೃಹಸ್ಥಜೀವನದಲ್ಲಿ ಅನೇಕ ವಿದ್ಯಾರ್ಥಿಗಳಿಗೆ ಮತ್ತು ಬಡಬಗ್ಗರಿಗೆ ಧನಸಹಾಯವನ್ನು ಮಾಡಿದ್ದಾರೆ. ಅಲ್ಲದೆ ಸಮಾಜಸೇವೆಯನ್ನು ಮಾಡಲು ಸಮರ್ಥರಾದ ವಿದ್ವಾಂಸರನ್ನು ತಯಾರು ಮಾಡಿದ್ದಾರೆ. ವೈದಿಕರು, ಶ್ರಾವಕರು—ಹಳ್ಳಿಯವರು ಪೇಟೆಯವರು ಎಂಬ ಭೇದ ಭಾವನೆಗಳಿಲ್ಲದೆ ಸಮಾಜಸೇವೆಯನ್ನು ಮಾಡಿದ್ದಾರೆ. ಮೂಡಬಿದ್ರೆಯ ಜೈನ ಪಾಠಶಾಲೆಗೆ ಉತ್ತರದೇಶದಿಂದ ಬರುವ ಯಾತ್ರಿಕರಿಂದ ಸಹಸ್ರಾರು ರೂಪಾಯಿಗಳ ಸಹಾಯತೆಯನ್ನು ಮಾಡಿಸಿ ಕೊಟ್ಟಿದ್ದಾರೆ.

ಪುರಕ್ಕೆ ಹಿತವನ್ನು ಬಯಸುವವರು ಪುರೋಹಿತರು; ಅವರು ತಮ್ಮ ಯಜನಾದಿ ಷಟ್ಕರ್ಮಗಳಲ್ಲಿ ಆದರ್ಶಪ್ರಾಯರಾಗಿದ್ದರೆ, ಇತರ ಶ್ರಾವಕರೂ ಸದಾಚಾರಗಳಲ್ಲಿ ನಿರತರಾಗುತ್ತಾರೆ. ವೈದಿಕರು ಅಥವಾ ಜೈನಬ್ರಾಹ್ಮಣರು ತಂತಮ್ಮ ನಿತ್ಯಾನುಷ್ಠಾನಾದಿ ಕ್ರಿಯೆಗಳಲ್ಲಿ ನಿರತರಾಗಿ ಲೋಕದಲ್ಲಿ ಉಂಟಾ ಗುವ ರೋಗ, ದುರ್ಭಿಕ್ಷ ಮೊದಲಾದ ಉಪದ್ರವಗಳಿಗೆ ತಕ್ಕ ಪರಿಹಾರರೂಪ ವಾದ ಶಾಂತಿ, ಆರಾಧನೆ ಮುಂತಾದ ಕ್ರಿಯೆಗಳನ್ನು ಮಾಡುವುದು ಅವರ ಕುಲವೃತ್ತಿ. ಆದ್ದರಿಂದ ವೈದಿಕರು ಸಂಸ್ಕೃತಸಾಹಿತ್ಯ ಪೂಜಾವಿಧಿ, ಪ್ರತಿಷ್ಠಾವಿಧಿ, ಶಾಂತಿ, ಆರಾಧನೆ, ಜ್ಯೋತಿಷ ಮುಂತಾದ ಕ್ರಿಯಾಕಾಂಡಗಳಲ್ಲಿ ಉನ್ನತಿಯಾಗ ದಿದ್ದರೆ ನಮ್ಮ ಸಮಾಜನೆಂದೂ ಏಳ್ಗೆಯನ್ನು ಹೊಂದಲಾರದೆಂದು ಬಗೆದು, ದಕ್ಷಿಣ ಕನ್ನಡ ಜಿಲ್ಲೆಯ ಇಂದ್ರವರ್ಗದವರನ್ನು ಕ್ರಿ. ಶ. ೧೯೩೧ ರಲ್ಲಿ ಸಭೆ ಸೇರಿಸಿ, ತನ್ನಾಭಿಪ್ರಾಯವನ್ನು ಸೂಚಿಸಿದರು. ಅನಂತರ ಅವರೆಲ್ಲರ ಸಮ್ಮತಿ ಯಿಂದ ‘ ಜೈನಬ್ರಾಹ್ಮಣ ವಿದ್ಯಾವರ್ಧಕ ಸಂಘವನ್ನು ಸ್ಥಾಪಿಸಿದರು. ತನ್ಮೂ ಲಕ ಜಾತ್ಯುನ್ನತಿ, ವಿದ್ಯೋನ್ನತಿ, ಮತ್ತು ಧರ್ಮೋನ್ನತಿಯ ಕಾರ್ಯಗಳನ್ನು ಮಾಡುತ್ತಾ ಸುಮಾರು ಹತ್ತು ಹನ್ನೆರಡು ವರ್ಷಗಳಲ್ಲಿ ತನಗೆ ಯಾರೂ ಬೆಂಬಲ ವಿಲ್ಲದಿದ್ದರೂ, ಪ್ರತಿವರ್ಷವೂ ವೈದಿಕವಿದ್ಯಾರ್ಥಿಗಳಿಂದ ಪೂಜಾವಿಧಿ ಮೊದಲಾದ ಗ್ರಂಥಗಳಲ್ಲಿ ಪರೀಕ್ಷೆಯನ್ನು ಕೊಡಿಸಿ ಉತ್ತೀರ್ಣರಾದವರಿಗೆ ಪಾರಿತೋಷಿಕ ವಿತರಣವನ್ನು ಮಾಡಿಸಿದರು.

ಜಾತಿ ನಿಯಮಗಳು ಸರಿಯಾಗಿ ನಡೆಯುವಂತೆ ಅವಕ್ಕೆ ಅನುಕೂಲವಾದ ಷೋಡಶಕ್ರಿಯಾಮಂಜರಿ ಮುಂತಾದ ಗ್ರಂಥಗಳನ್ನು ಅರ್ಥಸಹಿತವಾಗಿ ಪ್ರಕಟಿ ಸಿದರು. ಕೆಲವು ಕಾರಣಗಳಿಂದ ಆ ಸಂಘವು ಕೆಲವು ವರ್ಷಗಳ ನಂತರ ನಡೆಯ ಲಶಕ್ಯವಾದ್ದರಿಂದ ಶ್ರೀ ಶಾಸ್ತ್ರಿಗಳು ಸಂಘದ ನಿಯಮಗಳಲ್ಲಿ ಜೈನವೈದಿಕರ ಶ್ರಾವಕರ ಉನ್ನತಿಗೆ ಅನುಕೂಲವೂ ಆದ ಶಾಸ್ತ್ರಭಾಂಡಾರವನ್ನಾದರೂ ಸ್ಥಾಪಿಸಿ ಸಮಾಜಕಾರ್ಯಗಳನ್ನು ಮಾಡುವುದು ಉತ್ತಮವೆಂದು ಭಾವಿಸಿ ಶಾಸ್ತ್ರಭಾಂಡಾ ರಕ್ಕೆ ಅನುಕೂಲವಾದ ಕಟ್ಟೋಣವನ್ನು ಮಾಡಿಸುವರೇ ಕ್ರಿ. ಶ. ೧೯೪೧ ನೇ ಆಗೋಸ್ತು ತಿಂಗಳಲ್ಲಿ ಪ್ರಾರಂಭಿಸಿದರು. ಇದರ ಕಟ್ಟೋಣ ವಗೈರೆಗಳಿಗೆ ಸುಮಾರು ಐದು ಸಾವಿರ ರೂಪಾಯಿಗಳ ವೆಚ್ಚವಾಗಿದೆ. ಇದಕ್ಕೆ ಅನೇಕ ಧರ್ಮಾ ತ್ಮರು ಸಹಾಯ ಮಾಡಿದ್ದಾರೆ. ಕೊನೆಗೆ ಅದು ಸಾಕಾಗದೆ ಜೈನಬ್ರಾಹ್ಮಣ ಸಂಘದ ೬೦೦ ರೂಪಾಯಿಗಳೂ ಉಪಯೋಗಿಸಲ್ಪಟ್ಟಿದೆ. ಅದಲ್ಲದೆ ಜೈನವೈದಿಕರ ಕ್ರಿಯಾಕಾಂಡ ಮುಂತಾದವುಗಳಿಗೆ ಅನುಕೂಲವಾಗುವಂತಹ ಸಂಹಿತಾಶಾಸ್ತ್ರ ಪ್ರತಿಷ್ಠಾವಿಧಿ, ಪೂಜಾವಿಧಾನ, ಜ್ಯೋತಿಷಕಲ್ಪಗ್ರಂಥ, ನೋಂಪಿ ಮೊದಲಾದು ವುಗಳನ್ನು ಸಂಗ್ರಹಿಸುವರೇ ಮತ್ತು ಬರೆಯಿಸುವರೇ ಸಂಘದಿಂದ ಸುಮಾರು ೪೦೦ ರೂಪಾಯಿಗಳು ವೆಚ್ಚವಾಗಿವೆ. ಆ ಗ್ರಂಥಸಂಗ್ರಹವನ್ನು ಪ್ರತ್ಯೇಕವಾಗಿ ಒಂದು ಕವಾಟನಲ್ಲಿ ಇರಿಸಲ್ಪಟ್ಟಿದೆ.

## ಜಿನವಾಣೀ ಸೇವೆ.

**ನ ಕಿಂಚಿದಂತರಂ ಪ್ರಾಹುರಾಪ್ತಾ ಹಿ ಶ್ರುತದೇವಯೋಃ ||**

ಜಿನಮುಖಕಮಲವಿನಿರ್ಗತವಾದ ವಚನ ಅಥವಾ ದಿವ್ಯಧ್ವನಿಗೆ ಶಾಸ್ತ್ರವೆಂದು ಹೆಸರು. ಅಭೇದನಯಾಪೇಕ್ಷೆಯಿಂದ ದೇವರು ಮತ್ತು ಅವರ ವಚನ ಇವುಗಳಲ್ಲಿ ವ್ಯತ್ಯಾಸವಿಲ್ಲವೆಂದು ಪಂಡಿತ ಆಶಾಧರ ಸೂರಿಗಳ ಅಭಿಪ್ರಾಯ ! ಆದ್ದರಿಂದ ನಮಗೆ ಹೇಯೋಪಾದೇಯ ಜ್ಞಾನವು ಶಾಸ್ತ್ರದಿಂದಲೇ ದೊರೆಯುವುದು ದೇವರು ಹೇಗಿರಬೇಕು ? ಅವರ ಲಕ್ಷಣವೇನು ? ಇದು ಮೊದಲಾದ ವಿಷಯಗಳು ನಮಗೆ ಶಾಸ್ತ್ರದಿಂದಲೇ ಗೊತ್ತಾಗಬೇಕು. ಅಂತಹ ಶಾಸ್ತ್ರಭಂಡಾರಗಳನ್ನು ನಿರ್ಮಾಪಿಸುವುದರಿಂದ ಜಿನಚೈತ್ಯಾಲಯ ನಿರ್ಮಾಣಕ್ಕಿಂತಲೂ ಹೆಚ್ಚಿನ ಪುಣ್ಯವಿದೆ. ನಮ್ಮ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಅಂತಹ ಸಾರ್ವಜನಿಕವಾದ ಶಾಸ್ತ್ರಭಂಡಾರಗಳೇ ಇಲ್ಲ. ಇತ್ಯಾದಿ ಭಾವನೆಗಳಿಂದ ಮೂಡಬಿದ್ರೆಯಲ್ಲಿ ಅಂತಹದೊಂದು ಶಾಸ್ತ್ರಭಂಡಾರವನ್ನು ಸ್ಥಾಪಿಸಬೇಕೆಂದು ಬಗೆದು, ಎಲ್ಲಿಯೂ ಅದಕ್ಕೆ ಯೋಗ್ಯವಾದ ಸ್ಥಳ ದೊರೆಯದೆ ನಿರುತ್ಸಾಹರಾಗಿದ್ದರು. ಕೊನೆಗೆ ಧರ್ಮಾತ್ಮರಾದ ಚಿ. ನಾಗರಾಜ ಶೆಟ್ರು ಮತ್ತು ಜಿನರಾಜ ಶೆಟ್ರು ಇವರೊಡತೆ ತನ್ನ ಮನೋಗಭಿಪ್ರಾಯವನ್ನು ನಿವೇದಿಸಿಕೊಂಡರು. ಇವರೀರ್ವರೂ ಬಲು ಸಂತೋಷಪಟ್ಟು ! ತನ್ನ ಪಿತ್ರಾರ್ಜಿತವಾದ ಒಂದು ಸ್ಥಳವನ್ನು ಮೂಲಗೇಣಿಗೆ ಕೊಡುತ್ತೇನೆಂದು ಚಿ. ನಾಗರಾಜ ಶೆಟ್ರು ವಚನವಿತ್ತರು. ೧೯—೩—೦ ಗೇಣಿ ನಿರ್ಣೈಸಲ್ಪಟ್ಟಿತು. ಆದರೆ ಆ ಸ್ಥಳವು ಹಾಳು ಬಿದ್ದು ಭಯಂಕರ ಘೋರಾರಣ್ಯವಾಗಿ ಪರಿಣಮಿಸಿದ್ದಿತು ! ಅಂತಹ ಸ್ಥಳವು ಬೇಡವೆಂದೂ, ಇದನ್ನು ದುರುಸ್ತಿಪಡಿಸಿ ಒಂದು ರೂಪಕ್ಕೆ ತರಲು ತನ್ನಂತಹನಿಂದ ಸಾಧ್ಯವಿಲ್ಲವೆಂದೂ ಮೊತ್ತಮೊದಲು ಇವರಿಗೆ ಕಾಣುತ್ತಿತ್ತು ! ಸುಮಾರು ಒಂದು ವರ್ಷ ಆ ಸ್ಥಳವನ್ನು ಸರಿಪಡಿಸುವರೇ ಹೆಚ್ಚಾದ ಖರ್ಚಿನಿಂದ ಪರಿಶ್ರಮ ಪಡಬೇಕಾಯಿತು ! ತಾ. ೧—೮—೧೯೩೧ ರಲ್ಲಿ ಪ್ರಾರಂಭಿಸಿ, ೧೯೩೩ ನೇ ದಿಶಂಬರದಲ್ಲಿ ಶ್ರೀವೀರವಾಣೀವಿಲಾಸ ಜೈನಸಿದ್ಧಾಂತ ಭವನದ ವಿಶಾಲವಾದ ಕಟ್ಟೋಣದ ಕಾರ್ಯವನ್ನು ಕೊನೆಗಾಣಿಸಿದರು.

ಬಳಿಕ ಅದೇ ತಿಂಗಳಲ್ಲಿ ( ೧೩—೧೨—೧೯೩೩ ) ಸೊಲಾಪುರದ ದಾನವೀರ, ಧರ್ಮವೀರ ಮೊದಲಾದ ಉಪಾಧಿಗಳಿಂದ ಭೂಷಿತರಾದ ರಾವಜಿ ಸಖಾರಾಮ ದೋಶಿಯವರ ಅಧ್ಯಕ್ಷತೆಯಲ್ಲಿ ಈ ಭವನದ ಉದ್ಘಾಟನಾ ಸಮಾರಂಭವು ನೆರವೇರಿತು. ಆ ಸಮಾರಂಭದಲ್ಲಿ ಸಹಸ್ರಾರು ಮಂದಿ ಜೈನ–ಜೈನೇತರ ಮಹನೀಯರು ನೆರೆದಿದ್ದರು. ಆಗ ಜೈನ ಮಹಾಸಭೆ ಮಹಿಲಾಸಮ್ಮೇಲನ ಕೀರ್ತನ ಮುಂತಾದುವುಗಳು ಜರಗಿದ್ದವು. ಆ ಸಂದರ್ಭದಲ್ಲಿ ಶಾಸ್ತ್ರಿಗಳು ಮಾಡಿದ ಶ್ರೀಜಿನವಾಣಿಯ ಅಪೂರ್ವ ಸೇವೆಗಾಗಿ '**ಸರಸ್ವತೀಭೂಷಣ**' ಎಂಬ ಪ್ರಶಸ್ತಿಯನ್ನು ಅಲ್ಲಿ ನೆರೆದ ಜೈನ ಮಹಾಸಭಿಕರು ದಯಪಾಲಿಸಿದರು.

ಈ ಭವನದ ಕಟ್ಟೋಣ ನಿರ್ಮಾಣಕ್ಕೆ ಆದ್ಯ ಸಹಾಯಕರು ಅವರ ಧಾರ್ಮಿಕ ಮಿತ್ರರಾದ ಫಲ್ಟನ್ ಸೇಠ್ ವೀರಚಂದ ಕೋದರಜೀ ಗಾಂಧಿಯು ಯವರು ಮತ್ತು ದಾನವೀರ ಸೇಠ್ ರಾವಜೀ ಸಖಾರಾಮ ದೋಶಿಯವರು. ಇದರಲ್ಲಿ ಮೊದಲನೆಯವರು ಎರಡು ಸಹಸ್ರ ರೂಪ್ಯಾಗಳನ್ನೂ ಎರಡನೆಯವರು ಒಂದು ಸಹಸ್ರ ರೂಪ್ಯಾಗಳನ್ನೂ ಉದಾರ ಮನಸ್ಸಿನಿಂದ ಸಹಾಯ ಮಾಡಿರು ತ್ತಾರೆ. ಈ ಭವನ ನಿರ್ಮಾಣದ ಸಂಪೂರ್ಣ ಶ್ರೇಯಸ್ಸು ಅವರೀರ್ವರಿಗೆ ಸಲ್ಲ ತಕ್ಕದ್ದಿದೆ. ಶಾಸ್ತ್ರಿಗಳು ಹೀಗೆಯೇ ಧರ್ಮಾತ್ಮರಿಗೆ ಪ್ರೋತ್ಸಾಹಕೊಟ್ಟು ಬಹಳ ಪರಿಶ್ರಮದಿಂದ ಭವನದ ಕಟ್ಟೋಣವನ್ನು ಸುಂದರವಾಗಿ ಮಾಡಿಸಿದ್ದಾರೆ. ಈ ಕಾರ್ಯಕ್ಕಾಗಿ ಇವರ ತಮ್ಮ ವರ್ಧಮಾನ ಶಾಸ್ತ್ರಿಗಳು, ಚಿ. ಜಿನರಾಜ ಶೆಟ್ಟಿ ಮತ್ತು ಅರಮನೆ ಜಗತ್ಪಾಲಯ್ಯನವರು ಸಂಪೂರ್ಣ ಸಹಾಯಕರಾಗಿದ್ದರು.

ಶಾಸ್ತ್ರಿಗಳು ಶಾಸ್ತ್ರಭಂಡಾರವನ್ನು ಸ್ಥಾಪಿಸಬೇಕೆಂಬ ಸದುದ್ದೇಶದಿಂದಲೇ ಹತ್ತು ಮೂವತ್ತು ವರ್ಷಗಳಿಂದ ಸಂಗ್ರಹಿಸಲ್ಪಟ್ಟಿದ್ದ ಸುಮಾರು ಎರಡು ಸಾವಿರ ಪುಸ್ತಕ ಮತ್ತು ವಾಲೇಗರಿ ಗ್ರಂಥಗಳನ್ನು ಸರ್ವ ಜನರಿಗೆ ಉಪಯೋಗವಾ ಗುವಂತೆ ಈ ಭವನಕ್ಕೆ ಸಂತೋಷದಿಂದ ದಾನ ಮಾಡಿರುತ್ತಾರೆ. ಅದಲ್ಲದೆ ಈ ಜಿಲ್ಲೆಯಲ್ಲಿ ಮನೆಮನೆಗಳಲ್ಲಿ ಸಂಚರಿಸಿ ಅಲ್ಲಲ್ಲಿ ಹಾಳುಬಿದ್ದಿರುವ ವಾಲೆಗ್ರಂಥಗ ಳನ್ನು ಸಂಗ್ರಹಿಸಿರುತ್ತಾರೆ. ಸುಮಾರು ಹತ್ತುಹನ್ನೆರಡು ವರ್ಷಗಳಲ್ಲಿ ಅವೈತನಿಕ ರೂಪವಾಗಿಯೇ ಜಿನವಾಣಿ ಸೇವೆಯನ್ನು ಮಾಡಿದ್ದಾರೆ. ಭವನದಲ್ಲಿ ಮೂಲ ಧನವಿಲ್ಲ. ಆದರೂ ಭವನದ ರಿಪೇರಿ ಮೊದಲಾದ ಕಾರ್ಯಗಳನ್ನು ತನ್ನ ಸ್ವಂತ ಖರ್ಚಿನಿಂದಲೇ ಮಾಡಿದ್ದಾರೆ.

**ಸಾಹಿತ್ಯಸೇವೆ:—** ಜೈನಸಮಾಜೋನ್ನತಿಗೆ ಸಾಹಿತ್ಯಸೇವೆಯೂ ಒಂದು ಕಾರಣ; ಜೈನ ಸಾಹಿತ್ಯ ಮತ್ತು ಧರ್ಮಗ್ರಂಥಗಳ ಪ್ರಚಾರವಾಗದೆ ಸಮಾ ಜೋನ್ನತಿಯಾಗದು. ಜೈನಾಚಾರ್ಯರು ಅನೇಕ ಗ್ರಂಥಗಳನ್ನು ರಚಿಸಿದ್ದಾರೆ. ಅವುಗಳನ್ನು ಸರಲವಾಗಿ ಕನ್ನಡದಲ್ಲಿ ಬರೆದು ಅಥವಾ ಭಾಷಾಂತರಿಸಿ, ಎಲ್ಲರಿಗೂ ತಿಳಿಯುವಂತೆ ಮಾಡಬೇಕು. ಇಲ್ಲವಾದರೆ ಶಾಸ್ತ್ರಭಂಡಾರಗಳಿಂದೇನು ಪ್ರಯೋ ಜನ ? ಎಂದು ಯೋಚಿಸಿ ಶಾಸ್ತ್ರಿಗಳು ತನ್ನ ಜೀವಮಾನದಲ್ಲಿ ಅನೇಕ ಗ್ರಂಥಗ ಳನ್ನು ಪ್ರಕಟಿಸಿದ್ದಾರೆ. ಮೊತ್ತಮೊದಲು ಕ್ರಿ. ಶ. ೧೯೨೧ ರಲ್ಲಿ ಸ್ಯಾದ್ವಾದ ಗ್ರಂಥಮಾಲೆಯನ್ನು ಸ್ಥಾಪಿಸಿದರು. ತನ್ಮೂಲಕ ಈ ಕೆಳಗಿನ ಪುಸ್ತಕಗಳನ್ನು ಪ್ರಚಾರಗೊಳಿಸಿದ್ದಾರೆ.

೧ ವ್ರತಸ್ವರೂಪ ೨ ಜೈನಧರ್ಮಪ್ರಶ್ನೋತ್ತರ ೩ ಸೃಷ್ಟಿವಾದ ವಿಚಾರ ೪ ಶೋಭನ ಸಮುಚ್ಚಯ ೫ ಪದ್ಮಾವತಿ ಸಹಸ್ರನಾಮ ೬ ಅಷ್ಟಾವಧಾನಾದಿ ಪದಸಂಗ್ರಹ ೭ ಜೈನಾರ್ಚನಾ ಕುಸುಮ ಸಂಗ್ರಹ ೮ ಭವ್ಯಾಮೃತ ೯ ಆರ್ಯ ಧರ್ಮ ೧೦ ವೈರಾಗ್ಯಮಣಿಮಾಲಾ ೧೧ ಷೋಡಶಕ್ರಿಯಾಮಂಜರಿ

೧೨ ಭವ್ಯಚಿಂತಾಮಣಿ ೧೩ ಸ್ತೋತ್ರಸಾರ ಸಂಗ್ರಹ ೧೪ ನವರತ್ನ ಪರೀಕ್ಷೆ ೧೫ ದಶಲಾಕ್ಷಣಿಕ ಧರ್ಮಸಂಗ್ರಹ ೧೬ ಜೀವದಯಾಷ್ಟಮಿ ಕಥೆ ೧೭ ಕರ್ಮದಹನಾರಾಧನೆ ೧೮ ತುಳುನಾಡಿನ ಬಸದಿಗಳು ೧೯ ಜಿನಭಜನ ಸಂಗ್ರಹ.

ಕ್ರಿ. ಶ. ೧೯೩೪ ರಲ್ಲಿ ಶ್ರೀ ವೀರವಾಣೀವಿಲಾಸ ಗ್ರಂಥಮಾಲೆಯನ್ನು ಸ್ಥಾಪಿಸಿದರು. ತನ್ಮೂಲಕವೂ ಅನೇಕ ಗ್ರಂಥಗಳನ್ನು ಪ್ರಚಾರಗೊಳಿಸಿದ್ದಾರೆ. ಅವುಗಳಲ್ಲಿ ಕೆಲವು ಪುಸ್ತಕಗಳನ್ನು ಭವನದ ಖರ್ಚಿನಿಂದಲೂ, ಕೆಲವನ್ನು ತನ್ನ ಸ್ವಂತ ಖರ್ಚಿನಿಂದಲೂ ಮಾಡಿದ್ದಾರೆ.

೧ ಬಾಲಬೋಧ ಜೈನಧರ್ಮ ೧ ನೆ ಭಾಗ ೨ ಬಾಲಬೋಧ ಜೈನಧರ್ಮ ೨ನೆ ಭಾಗ ೩ ಬಾಲಬೋಧ ಜೈನಧರ್ಮ ೩ ಭಾಗ ೪ ಮೂಡಬಿದ್ರೆ ಚರಿತ್ರೆ ೫ ಸ್ತೋತ್ರಮಂತ್ರಸಾರ ಸಂಗ್ರಹ ೬..... ೭ ಸ್ತೋತ್ರ ಮಂಜರಿ ೮ ಅನಂತ ನೋಂಪಿ ವಿಧಾನ ೯ ಅನೇಕಾಂತವರ್ಶನ ೧೦ ಅಧ್ಯಾತ್ಮರಸಮಂಜರಿ ೧೧ ಬಾಲಬೋಧ ಜೈನಧರ್ಮ ೪ ಭಾಗ ೧೨ ಸಟೀಕಾ ರತ್ನಕರಂಡ ಶ್ರಾವಕಾಚಾರ ೧೩ ಕಂತಿ ಪಂಪನ ಸಮಸ್ಯೆ ೧೪ ವೇಣೂರಿನ ಗತ ವೈಭವ ೧೫ ಶಾಂತಿನಾಥ ಚರಿತ್ರೆ ೧೬ ಸ್ವಯಂಭೂಸ್ತೋತ್ರ ಸಟೀಕಾ. ೧೭ ಶ್ರೇಣಿಕನ ಚರಿತ್ರೆ. ಈ ರೀತಿಯಾಗಿ ಸ್ಯಾದ್ವಾದಗ್ರಂಥಮಾಲೆಯಲ್ಲಿ ಹತ್ತಿಪ್ಪತ್ತು ಪುಸ್ತಕಗಳನ್ನು ಶ್ರೀವೀರವಾಣೀವಿಲಾಸ ಗ್ರಂಥಮಾಲೆಯಲ್ಲಿ ಸುಮಾರು ಹದಿನೇಳು ಪುಸ್ತಕಗಳನ್ನು ಸಂಪಾದಿಸಿ ಪ್ರಕಟಿಸಿದ್ದಾರೆ. ಅವುಗಳಲ್ಲಿ ಕೆಲವನ್ನು ಕನ್ನಡ ಟೀಕಾಸಹಿತವಾಗಿ ರಚಿಸಿದ್ದಾರೆ. ಇಷ್ಟೇ ಅಲ್ಲದೆ ಇದುವರೆಗೆ ಮುದ್ರಣವಾಗದಿರುವ ಪ್ರಾಚೀನ ಗ್ರಂಥಗಳನ್ನು ಪ್ರಕಟಿಸುವರೇ ಮದ್ರಾಸ್ ಯೂನಿವರಿಸಿಟಿ ಮೈಸೂರು ಓರಿಯಂಟಲ್ ಲೈಬ್ರೆರಿ, ಭಾರತೀಯ ಜ್ಞಾನಪೀಠ ಮೊದಲಾದ ಸಂಸ್ಥೆಗಳ ಗ್ರಂಥಪ್ರಕಾಶಕರಿಗೆ ಅನೇಕ ವಾಲೆ ಗ್ರಂಥಗಳನ್ನು ಕಳುಹಿಸಿಕೊಟ್ಟು ಹೆಚ್ಚಿನ ಸಾಹಿತ್ಯಸೇವೆ ಮಾಡಿದ್ದಾರೆ. ಅಲ್ಲದೆ ಹಿಂದೆ ಹೇಳಿದಂತೆ ಹತ್ತು ಮೂವತ್ತು ವರ್ಷಗಳಲ್ಲಿ ಆರ್ರಾ, ಮುಂಬಯಿ, ಸಹರನ್‌ಪೂರ, ಇಂದೂರ, ಕಲ್ಕತ್ತಾ ಮೊದಲಾದ ಸಿದ್ಧಾಂತಭವನಗಳಿಗೆ ಇಲ್ಲಿಂದ ಬರೆಯಿಸಿದ ಗ್ರಂಥಗಳ ಶ್ಲೋಕ ಸಂಖ್ಯೆಯು ಎರಡು ಲಕ್ಷಕ್ಕೆ ಮಿಕ್ಕಿರಬಹುದು.

ಇಷ್ಟುಮಾತ್ರವಲ್ಲದೆ ಸಿದ್ಧಾಂತಗ್ರಂಥಗಳ ಸೇವೆಯನ್ನು ತನ್ನ ಶಕ್ತಿಮೀರಿ ಮಾಡಿರುತ್ತಾರೆ. ಮೊತ್ತಮೊದಲು ಸಹರನ್‌ಪುರಕ್ಕೆ ಹೋಗಿ ಧವಲಾ ಮತ್ತು ಜಯಧವಲಗಳ ಸಂಶೋಧನೆಯನ್ನು ಬಳಿಕ ಅಮರಾವತಿ ಮತ್ತು ಕಾಶೀ ಜೈನಸಂಘದವರಿಗೆ ಧವಲಾ ಮತ್ತು ಜಯಧವಲಗಳ ಮೂಲ ಪ್ರತಿಯೊಡನೆ ಮುಖಾಬಿಲೆಯನ್ನು ಆ ಮೇಲೆ ಶ್ರೀ ಶಾಂತಿಸಾಗರ ಆಚಾರ್ಯರ ಸಂಸ್ಥೆಯಿಂದ ತಯಾರಾಗುವ ತಾಮ್ರಶಾಸನಕ್ಕೆ ಸದ್ರಿ ಗ್ರಂಥಗಳ ಸಂಶೋಧನೆಯನ್ನು ಮಾಡಿ ಕೊಟ್ಟದ್ದಾರೆ ಮತ್ತು ಸುಮಾರು ೪೦ ಸಾವಿರ ಶ್ಲೋಕ ಪರಿಮಿತವಾದ ಮಹಾಧವಲಸಿದ್ಧಾಂತ ಮೂರು ಸಾರಿ ಪ್ರತಿಲಿಪಿಗಳನ್ನು ಮಾಡಿದ್ದಾರೆ. ಇದೊಂದು ಅವರ ಜೀವನದಲ್ಲಿ ಅತಿ ಮಹತ್ವವಾದ ಕಾರ್ಯ.

**ಉಪಸಂಹಾರ**— ಶ್ರೀಮಾನ್ ಲೋಕನಾಥ ಶಾಸ್ತ್ರಿಗಳು ಅವರ ವ್ಯಕ್ತಿತ್ವಾ
ಪೇಕ್ಷೆಯಿಂದ ಉದಾರಿಗಳೂ ಪರೋಪಕಾರಿಗಳೂ ಆಗಿದ್ದರು. ಅವರ ಜೀವಮಾನ
ದಲ್ಲಿ ಅನೇಕ ಬಡವಿದ್ಯಾರ್ಥಿಗಳಿಗೆ ಮತ್ತು ಬಡಬಗ್ಗರಿಗೆ ಧನಸಹಾಯವನ್ನು
ಮಾಡಿದ್ದಾರೆ. ಸಾರ್ವಜನಿಕ ಸಂಸ್ಥೆಗಳಿಗೆ ಯಥಾಶಕ್ತಿಯಾಗಿ ದಾನ ಮಾಡಿರು
ತ್ತಾರೆ. ಅತಿಥಿಸತ್ಕಾರವೆಂದರೆ ಅವರಿಗೆ ಬಲು ಸಂತೋಷ ! ಶ್ರೀವೀರವಾಣೀ
ವಿಲಾಸ ಸಿದ್ಧಾಂತಭವನದ ಮೂಲಧನಕ್ಕೆ ಸಾಲಿಯಾನಾ ಹತ್ತು ಮುಡಿ ಅಕ್ಕಿ
ಯಂತೆಯೂ ವೇಣೂರು ದೊಡ್ಡ ಬಸ್ತಿ ಶಾಂತೀಶ್ವರಸ್ವಾಮಿಯ ಪೂಜಾವಿನಿಯೋಗದ
ಬಗ್ಗೆ ವರ್ಷಂ ಪ್ರತಿ ಬೆಳ್ತಿಗೆ ಅಕ್ಕಿ ನಾಲ್ಕು ಮುಡಿಯಂತೆಯೂ ಅವರ ತಾಯಿ
ಅಮೃತಮ್ಮನ ಜೀವನದ ಬಗ್ಗೆ ವರ್ಷಂಪ್ರತಿ ಆರು ಮುಡಿ ಅಕ್ಕಿಯಂತೆಯೂ
ಕೊಟ್ಟುಬರಬೇಕಾಗಿ ದಾನಶಾಸನ ಮಾಡಿರುತ್ತಾರೆ. (ಫ)

ಹೋದ ವರುಷದಿಂದ ಅವರ ಶರೀರಸ್ಥಿತಿಯು ಕೆಡುತ್ತ ಅತಿ ಕ್ಷೀಣವಾಗು
ತ್ತಿತ್ತು. ಅವರು ಇದುವರೆಗೆ ಸ್ವಲ್ಪದಿನಗಳ ಮಟ್ಟಿಗೆ ಕಾಲನಿಗೆ ಹೇಳಿ ನಿಂತಿದ್ದರೋ
ಎಂಬಂತೆ ತನ್ನ ಮತ್ತು ತನ್ನ ತಮ್ಮಂದಿರ ಮಕ್ಕಳ ಮಂಗಲ ಕಾರ್ಯಗಳನ್ನು
ಮುಗಿಸಿ ಇಹಲೋಕ ಯಾತ್ರೆಯನ್ನು ಪೂರ್ಣ ಮಾಡುವ ವಿಚಾರದಲ್ಲಿದ್ದರೆಂದು
ವಿಧಿಯ ನಿಯಮದಿಂದ ಕಾಣುತ್ತದೆ. ಇದೇ ಮೇ ತಿಂಗಳ ೭ ತಾರೀಕಿಗೆ ಪಡುಬಿ
ದ್ರೆಯಲ್ಲಿ ತನ್ನ ಮತ್ತು ತನ್ನ ತಮ್ಮನ ಕನ್ಯೆಯರಿಗೆ ತನ್ನ ಕೈಯಿಂದಲೇ ಧಾರೆ
ಯೆರೆದು ಮೂಡಬಿದ್ರೆಗೆ ಬಂದು ತಾ. ೧೪ ಕ್ಕೆ ತಮ್ಮ ನೇಮಿರಾಜನ ಕನ್ಯೆಗೆ
ಧಾರೆಯೆರೆದು ಕೊಟ್ಟರು. ತಾ. ೧೫ ಕ್ಕೆ ನಾವು ಮೂಡಬಿದ್ರೆಯಿಂದ ಸೊಲ್ಲಾಪು
ರಕ್ಕೆ ಹೊರಟೆವು. ಹೊರಡುವಾಗ ನನ್ನ ಚಿರಂಜೀವಿಗಳನ್ನು "ಇನ್ನೊಮ್ಮೆ
ಬರುವಾಗ ನಾನಿರುವುದಿಲ್ಲ. ನೀವು ಸುಖವಾಗಿ ಹೋಗಿರೆಂದು' ಹರಸಿ ಕಳುಹಿ
ಸಿದರು. ಆ ಮಾತು ೧೦ ದಿವಸಗಳಲ್ಲಿಯೇ ಸತ್ಯವಾಗುವುದಿದೆ ಎಂದು ಯಾರಿಗೂ
ಕಲ್ಪನೆ ಇರಲಿಲ್ಲ. ತಾ. ೨೬ ಕ್ಕೆ ಇಹಲೋಕಯಾತ್ರೆಯನ್ನು ಮುಗಿಸಿದರೆಂಬ
ವಾರ್ತೆಯು ತಂತಿಯಿಂದ ಬಂದು ಸಿಡಿಲು ಬಡೆದಂತಾಯಿತು. ಭವಿತವ್ಯವನ್ನು
ಯಾರಿಗೆ ಮೀರಲು ಸಾಧ್ಯ ?

ಅವರು ಸಪ್ತಪರಮಸ್ಥಾನಗಳ ಸೂಚಕವೋ ಎಂಬಂತೆ ಏಳು ಜಿನಮಂ
ದಿರಗಳ ಪಂಚಕಲ್ಯಾಣಮಹೋತ್ಸವವನ್ನು ಆ ಭಗವಂತನಿಗೆ ಸಾವಿರದೆಂಟು
ಕಲಶಾಭಿಷೇಕಪೂರ್ವಕವಾಗಿ ಮಾಡಿರುತ್ತಾರೆ.

ಪಂಚಮಗತಿಯ ಪ್ರಾಪ್ತಿಗಾಗಿಯೋ ಎಂಬಂತೆ ಐದು ಸಾರಿ ಸಮ್ಮೇದಶಿಖರ
ಪಾವಾಪುರಿ ಚಂಪಾಪುರಿ ರಾಜಗಿರಿ ಮೊದಲಾದ ತೀರ್ಥಕ್ಷೇತ್ರಗಳ ಪವಿತ್ರದರ್ಶ
ನವನ್ನು ಮಾಡಿದ್ದಾರೆ. ಆದುದರಿಂದ ಅವರ ಜೀವನವು ಆದರ್ಶವಾಗಿದೆ.

ಅವರ ಆತ್ಮನು ಅಮರನಾಗಿರಲಿ ! ಅವರ ಕೀರ್ತಿಯು ಈ ಲೋಕದಲ್ಲಿ
ಆಚಂದ್ರಾರ್ಕಸ್ಥಾಯಿಯಾಗಿರಲಿ ! ಅವರ ಆತ್ಮನಿಗೆ ಪರಲೋಕದಲ್ಲಿ ಶಾಂತಿಸು
ಖವು ದೊರೆಯಲಿ. ಅವರಿಗೆ ಕೈವಲ್ಯಪದದ ಪ್ರಾಪ್ತಿಯು ಅವಿಲಂಬವಾಗಲಿ.

(ಫ) ಇವರ ಪ್ರಥಮ ಪುತ್ರಿ ಶ್ರೀಮತಿ ವಿ. ಧನ್ಯಕುಮಾರಿಯವರನ್ನು ಮೂಡುಬಿದ್ರೆ [illegible] 'ರಾಜ್ಯಪ್ರಶಸ್ತಿ ವಿಜೇತ' [illegible] ಶ್ರೀ ದೇವಕುಮಾರ ಶಾಸ್ತ್ರಿಗಳು 'ಪ್ರತಿಷ್ಠಾಚಾರ್ಯ' ಇವರಿಗೆ [illegible] ವಿವಾಹ ಮಾಡಿ ಕೊಟ್ಟಿದ್ದರು.

ರಾಗಕೆ ರೋಷಕಾಗಿ ಲಲನಾದಿವಿಯೋಗದೊಳುಗ್ರಯುದ್ಧದೊಳ್ ।
ನೀಗಿದೆನಂಗಕೋಟಿಗಳನಂತದರಿಂ ಭವರೋಗಿಯಾದೆನಾ ॥
ರೋಗದ ಮೂಲಮಂ ಸುಡುವ ಘೋರತಪಂದಳೆದೊಂದು ಕಾಯಮಂ।
ತ್ಯಾಗಿಸಲಂಜುತಿರ್ದಪೆಸಲಾ ಧೃತಿದೋರಪರಾಜಿತೇಶ್ವರಾ !

‡ ‡ ‡ ‡

ಮೊನ್ನೆ ಬರುತ್ತೆ ಕಂಡೆನವನಂ ಮೃತನಾದನೆ ಯಾದನಕ್ಕಟಾ !
ನಿನ್ನೆ ಸುಗೋಷ್ಠಿಗೆಯ್ದಿನವನೊಳ್ ಲಯವಾದನೆ ಯಾದನಯ್ಯೊ! ಇಂ-
ದೆನ್ನೊಡವಂದನೀತನಕಟಾ ! ಕಡೆಗಂಡನೆ ಕಂಡನೆಂಬ ಮಾ- ।
ತಂ ನೆರೆ ಕೇಳುತೆನ್ನೊಡಲನಚ್ಚುವೆನೆಂತಪರಾಜಿತೇಶ್ವರಾ !

‡ ‡ ‡ ‡

ಎಲೆಯೆಲೆ ಇತ್ತಲಿರ್ದ ಮೊಗವತ್ತೊಲೆದೀಕ್ಷಿಸೆ ಮುನ್ನ ಕಂಡರೊಳ್ ।
ಕೆಲಬರನಲ್ಲಿ ಕಾಣಲರಿದಿಂತುಟು ತೋರುತ ಮಾಯಮಪ್ಪ ಮು-
ಯ್ಬಲೆಯೊಳೆ ಬಾಳ್ವೆನೆಂಬ ಮನವಲ್ಲದೆ ತತ್ತನುವಂ ತಪಂಗಳೊಳ್ ।
ಸಲಿಸಿ ನಿಜತ್ವಮಂ ಪಡೆಯಲಂಜುವೆನೇಕಪರಾಜಿತೇಶ್ವರಾ ! ॥

‡ ‡ ‡ ‡